# ನಮ್ಮ ಮಾನಸ

ಸಂಪುಟ : 4 ಮಾರ್ಚ್ 2011 ಸಂಚಿಕೆ : 11

ವಿಶೇಷ ಸಂಚಿಕೆ



ಪ್ರಜಾಪ್ರಭುತ್ವದ
ಕಗ್ಗತ್ತಲೆಯ ನಾಡಿನಲ್ಲಿ
ಬೆಳಕ ಚುಂಬಿಸಲು
ಗಾಂಧಿ ಸ್ಮರಣೆಯ
ಪುಟಗಳ ಜೀವಂತವಾಗಿರಿಸಿ
ಜೀವ ಒತ್ತೆ ಇಟ್ಟು
ದಶಕಗಳ ಲೆಕ್ಕವಿಡದೆ ಉಪವಾಸ
ಶಾಂತಿ ಮಂತ್ರದ ಸ್ವಾತಂತ್ರ್ಯ ಹಕ್ಕಿ
ಇರೋಮ್ ಶರ್ಮಿಳಾಗೆ
ಓಜೋಸ್‌ಳ ಧ್ವನಿ ಪ್ರತಿಧ್ವನಿಸಿ
ಬೆಳಕ ಚುಂಬಿಸಲಿ ಕಗ್ಗತ್ತಲೆಯ ನಾಡು



# ಹೊನ್ನಿನ ಹಂದರದಲ್ಲಿ ಸುಂದರ ಕರ್ನಾಟಕ

**ಕರುನಾಡ ಸಿರಿನುಡಿ - ಕನ್ನಡ**
**ಕಸ್ತೂರಿ ಪರಿಮಳದ ಕುಡಿ - ಕನ್ನಡ ನುಡಿ**
**ಹಾಲ್ಜೇನಿನ ಮಧುರ ಝುರಿ - ಕನ್ನಡ ನಾಣ್ನುಡಿ**

ಸುಮಾರು 2000 ವರ್ಷಗಳ ಇತಿಹಾಸವಿರುವ ಕನ್ನಡ ಭಾಷೆ, ಸಾಹಿತ್ಯ ಅನನ್ಯ ಮತ್ತು ಅನುಕರಣೀಯ. ಇಂದು ಕೂಡ ಕರ್ನಾಟಕ ಸಮಗ್ರ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ಆಟೋಮೊಬೈಲ್ ಉದ್ಯಮ, ಸಿದ್ಧಉಡುಪು, ಆಭರಣಗಳು, ಕ್ರೀಡೆ, ಪುಷ್ಪೋದ್ಯಮದಂಥ ಪ್ರಮುಖ ಕ್ಷೇತ್ರಗಳಲ್ಲಿ ಸಾಧಿಸಿದ ಪ್ರಗತಿಯೂ ಶ್ಲಾಘನೀಯ, ಕರ್ನಾಟಕ ಭಾರತಕ್ಕಷ್ಟೇ ಮಾತ್ರವಲ್ಲ ಇಡೀ ವಿಶ್ವಕ್ಕೆ ಮಾದರಿ.

**ಅಪಾರ ಕೀರ್ತಿ ಗಳಿಸಿ ಮೆರೆವ ಭವ್ಯನಾಡಿಗೆ.... ಇಂದು ಸುವರ್ಣ ಸಂಭ್ರಮ**



**ಕರ್ನಾಟಕ ವಾರ್ತೆ**

# ನಮ್ಮ ಮಾನಸ

**ಮಾರ್ಚ್ 2011**
ಸಂಪುಟ : 4 ಸಂಚಿಕೆ : 11

*Editor, Printer and Publisher*
***Rajeshwari H.S.,***
*No. 114/5, 9th Cross, 2nd Main*
*Chamarajpet, Bangalore - 560 018.*
*Mobile : 9449345698*

*Printed at*
***ILA Mudrana***
*No. 36, 40 Ft. Road, Raghavanagara,*
*New Timberyard Layout*
*Bangalore-26.*
*✆ : 26757159*

*ಸಂಪಾದಕ ಮಂಡಳಿ*
**ಚಂಪಾವತಿ ಹೆಚ್.ಎಸ್., ಸವಿತಾ ಎ.**
**ವೆಂ. ವನಜಾ, ಗೀತಾ, ಎಚ್.ಎಸ್. ಪುಷ್ಪಾ.**

*ಸಲಹೆ – ಸಹಕಾರ*
**ಇಳಾ ವಿಜಯಾ, ಸುಮಿತ್ರಾಬಾಯಿ ಬಿ.ಎನ್.**

*ಮಾನಸ ಬಳಗ*
**ತಸ್ನೀಂ ತಾಜ್, ವೇದವಲ್ಲಿ ಜೆ.ವಿ.**
**ವತ್ಸಲ ವೈ.ಎಸ್., ಶ್ಯಾಮಲ, ತಾಜುಮಾ**

*ಚಂದಾ ವಿವರ*

| | |
|---|---|
| **ಬಿಡಿಪ್ರತಿ** | **8–00 ರೂ.** |
| **ವಾರ್ಷಿಕ ಚಂದಾ** | **100–00 ರೂ.** |
| (ವಿಶೇಷ ಸಂಚಿಕೆಯೊಂದಿಗೆ) | |
| **ಸಂಸ್ಥೆಗಳಿಗೆ** | **150–00 ರೂ.** |

## ನಮ್ಮ ಮಾನಸ
114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ, ಬೆಂಗಳೂರು – 560 018

*ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ ಡಿ.ಡಿ. ಮೂಲಕ ಕಳಿಸಬಹುದು*

– – –

*ಮೈಸೂರಿನಲ್ಲಿ ಓದುಗರು ಪ್ರತಿಗಳಿಗೆ ಹಾಗೂ ಚಂದಾ ನವೀಕರಣಕ್ಕೆ ಸಂಪರ್ಕಿಸಿ*
**ವೆಂ. ವನಜ**
*2329, 12ನೇ ಮೈನ್, 2ನೇ ಹಂತ, ವಿಜಯನಗರ, ಮೈಸೂರು – 570 017*

**ಪ್ರಾರಂಭ : 'ಮಾನುಷಿ' (1985ರಲ್ಲಿ), ಅನಂತರ 'ಮಾನಸ', ಈಗ 'ನಮ್ಮ ಮಾನಸ'**





# ಮಹಿಳಾದಿನಕ್ಕೆ ನೂರೊಂದನೆಯ ವರ್ಷ ಪ್ರಸ್ತುತತೆ ಏನು?

**ನೂ**ರೊಂದನೆಯ ವರ್ಷಕ್ಕೆ ಕಾಲಿಟ್ಟಿರುವ 'ಅಂತರ ರಾಷ್ಟ್ರೀಯ ಮಹಿಳಾದಿನ'ಕ್ಕೆ ಈ ಹೊತ್ತಿನ ಪ್ರಸ್ತುತತೆ ಏನು? ಎಂಬುದನ್ನು ಅರ್ಥಮಾಡಿಕೊಳ್ಳಲು, ಈ ದಿನದ ಆಚರಣೆಯು ಮಹಿಳೆಯರ ರಾಜಕೀಯ, ಆರ್ಥಿಕ, ಸಾಮಾಜಿಕ ಹೋರಾಟ ಮತ್ತು ಸಾಧನೆಗಳ ಸ್ಮರಣೆ ಮತ್ತು ಮನನಗಳ ಸಾಂಕೇತಿಕ ಅಭಿವ್ಯಕ್ತಿಯೆಂಬುದನ್ನು ಮೊದಲು ಅರ್ಥಮಾಡಿಕೊಳ್ಳಬೇಕು.

ಜಗತ್ತಿನ ಮೊದಲಸ್ಥಾನದಲ್ಲಿ ಇಂದು ಇರುವಂಥ ದೇಶಗಳು ಒಂದು ಶತಮಾನದ ಹಿಂದೆ ಇನ್ನೂ ಅಭಿವೃದ್ಧಿ ನಿರತ ದೇಶಗಳಷ್ಟೇ ಅನ್ನಿಸಿಕೊಳ್ಳುತ್ತಿದ್ದವು. 19ನೆಯ ಶತಮಾನದಲ್ಲಿ ಪಶ್ಚಿಮದ ದೇಶಗಳಲ್ಲಿ ಸಂಭವಿಸಿದ ಕೈಗಾರಿಕಾಕ್ರಾಂತಿ, ವಿಜ್ಞಾನ, ತಂತ್ರಜ್ಞಾನಗಳು ಬಂಡವಾಳವನ್ನು ಇನ್ನೂ ಬೆಳಸುತ್ತಿದ್ದಾಗಿನ ಒಂದು ಹಂತದಲ್ಲಿ ನ್ಯೂಯಾರ್ಕ್ ನಗರದ ವಸ್ತ್ರಕೈಗಾರಿಕೆಗಳಲ್ಲಿ ಕಾರ್ಮಿಕರಾಗಿದ್ದ ಮಹಿಳೆಯರು ತಮ್ಮ ದುಡಿಮೆಯ ಜಾಗಗಳ ತೀರಾ ಅಸಹನೀಯ, ಅನಾರೋಗ್ಯಕರ ಪರಿಸರವನ್ನು ಸುಧಾರಿಸಬೇಕೆಂದೂ, ತಮಗೆ ನೀಡುವ ವೇತನವನ್ನು ದುಡಿಮೆಗೆ ತಕ್ಕಂತೆ ಹೆಚ್ಚಿಸಬೇಕೆಂದೂ ಹಕ್ಕೊತ್ತಾಯಿಸಿ ಕಾರ್ಖಾನೆಗಳಿಂದ ಹೊರಬಂದು ಬೀದಿಗಿಳಿದು ಸಾಮೂಹಿಕ ಸಾರ್ವಜನಿಕ ಪ್ರತಿಭಟನೆಯನ್ನು ನಡೆಸಿದ್ದು 1957ರ ಮಾರ್ಚ್ 8ರಂದು. ಆ ದಿನದ ಮಹತ್ವದ ಅರಿವು ಮಹಿಳಾ ಹೋರಾಟಗಾರರಿಗೆ ಅರಿವಿಗೆ ಬರುವುದಕ್ಕೆ 1910ರವರೆಗೂ ಕಾಯಬೇಕಾಯಿತು.

ಅಂತರ ರಾಷ್ಟ್ರೀಯ ಮಹಿಳಾ ದಿನವನ್ನು ಆಚರಿಸಬೇಕು ಎಂದು ಒಂದು ನಿರ್ಣಯವನ್ನು ಕೈಗೊಂಡವರು ಪಶ್ಚಿಮದ ಬೇರೆ ಬೇರೆ ದೇಶಗಳಲ್ಲಿ ಕಾರ್ಮಿಕರ ಹೋರಾಟ, ಕಾರ್ಮಿಕ ಸಂಘಟನೆ, ಸೋಷಲಿಷ್ಟ್ ಚಳವಳಿಗಳಲ್ಲಿ ಕ್ರಾಂತಿಕಾರಕವಾದ ಹೋರಾಟಗಳನ್ನು ನಡೆಸುತ್ತಿದ್ದ ಮಹಿಳೆಯರ ವಿಶ್ವನಾಯಕತ್ವಕ್ಕೆ ಅರ್ಹರಾಗಿದ್ದಂಥ ಮಹಿಳೆಯರಾಗಿದ್ದರು. ಈ ಆಚರಣೆಯ ಉದ್ದೇಶ ವಿಶ್ವದ ಎಲ್ಲ ಮಹಿಳೆಯರ ರಾಜಕೀಯಾರ್ಥಿಕ ಸಾಮಾಜಿಕ ಹೋರಾಟ ಮತ್ತು ಒಗ್ಗಟ್ಟುಗಳನ್ನು ಸಂಕೇತಿಸುವುದಾಗಿತ್ತು.

ಈಗ ಜಾಗತೀಕೃತ ಭಾರತದಲ್ಲಿ ಗಾರ್ಮೆಂಟ್ ಉದ್ಯಮ ಅತ್ಯಂತ ಲಾಭಕರ ಕೈಗಾರಿಕೆಗಳಲ್ಲಿ ಒಂದೆನಿಸಿದೆ. ಅತ್ಯಧಿಕ ಪ್ರಮಾಣದಲ್ಲಿ ಮಹಿಳೆಯರನ್ನು ಈ ಉದ್ಯಮವು ಆಕರ್ಷಿಸಿ, ಅವಕಾಶ ನೀಡಿ, ಅವರ ದುಡಿಮೆಯ ಶಕ್ತಿಯನ್ನು ತನ್ನ ಬಂಡವಾಳ ಹಾಗೂ ಲಾಭದ ಸಾಧನವನ್ನಾಗಿ ಮಾಡಿಕೊಂಡಿದೆ. ಈ ಮಹಿಳೆಯರನ್ನು ಕಡಿಮೆ ವೇತನಕ್ಕಾಗಿ ಹೆಚ್ಚು ಅವಧಿಯವರೆಗೆ ದುಡಿಯಿಸಿಕೊಳ್ಳುವುದು, ಹೆರಿಗೆ ರಜೆ, ಭತ್ಯೆ, ಮುಂಬಡ್ತಿ ಮುಂತಾದ ಉದ್ಯೋಗ ಸಂಬಂಧಿತವಾದ ಸವಲತ್ತುಗಳಿರದ ಕಾಂಟ್ರಾಕ್ಟ್ ದುಡಿಮೆಗೆ ಅವರು ಸೇರ್ಪಡೆ ಆಗುವುದು, ತಾತ್ಕಾಲಿಕತೆಯಿಂದಾಗಿ ಉದ್ಯೋಗವು ಸದಾ ಅಭದ್ರತೆಯಲ್ಲಿ ಅವರನ್ನು ಇರಿಸಿರುವುದು, ಯಾವಾಗ ಬೇಕಾದರೂ ಕಿತ್ತೊಗೆಯುವ ಬೆದರಿಕೆಗಳನ್ನೊಡ್ಡಿ ಲೈಂಗಿಕ ಕಿರುಕುಳಗಳನ್ನು ನೀಡುವುದು... ಇತ್ಯಾದಿ. ನೂರೈವತ್ತು ವರ್ಷಗಳ ಹಿಂದೆ ಪಶ್ಚಿಮದೇಶಗಳಲ್ಲಿ ಗಾರ್ಮೆಂಟ್ ಉದ್ಯಮದಲ್ಲಿ ದುಡಿಮೆಗಾರ ಮಹಿಳೆಯರು ಅನುಭವಿಸುತ್ತಿದ್ದ ಸ್ಥಿತಿಯಲ್ಲಿಯೇ ಇಂದು ನಮ್ಮ ದೇಶದ ಅದೇ ಕ್ಷೇತ್ರದ ಕಾರ್ಮಿಕ ಮಹಿಳೆಯರ ಸ್ಥಿತಿ ಇದೆ.

ಪಶ್ಚಿಮದಲ್ಲಿ ಅಂದು ಆರಂಭವಾದ ಮಹಿಳಾ ಹೋರಾಟ, ಮುಂದೆ ಮಹಿಳೆಯರಿಗೆ ಮತದಾನದ ಹಕ್ಕು, ನಾಗರಿಕ ಹಕ್ಕುಗಳಿಗಾಗಿ ನಡೆದ ಪ್ರಬಲವಾದ ಹೋರಾಟದ ರೂಪವನ್ನು ತಳೆಯಿತು. ಮಹಿಳಾ ಚಳವಳಿಯ ಸುದೀರ್ಘ ಹೋರಾಟದ ಚರಿತ್ರೆಯಲ್ಲಿ ಸಮಗ್ರ ಮಾನವ ಕುಲದ ಕ್ಷೇಮ, ಶಾಂತಿಯುತ ಜೀವನದ ಕಾಳಜಿಯೂ ಸದಾ ಕ್ರಿಯಾನಿರತವಾಗಿರುವಂಥದೆ. ಮೊದಲನೆಯ ವಿಶ್ವಮಹಾಯುದ್ಧ ಘೋಷಣೆಯಾದ ಹೊತ್ತಿನಲ್ಲಿಯೇ ರಷ್ಯಾದ ಮಹಿಳಾ ಹೋರಾಟಗಾರರು ಜಾಗತಿಕ ಶಾಂತಿಗಾಗಿ ಹಕ್ಕೊತ್ತಾಯಿಸಲು/ಮಿಲಿಯನ್ ಕರಪತ್ರಗಳನ್ನು ಮುದ್ರಿಸಿ ಪ್ರಸಾರಮಾಡಿದ್ದರು ಎಂಬುದು ಇಂಥ ಒಂದು ಉದಾಹರಣೆ. ನಮ್ಮ ದೇಶವು ವಸಾಹತುಶಾಹಿಯಾಗಿದ್ದ ಕಾಲದಲ್ಲಿ ಪಶ್ಚಿಮದ ಮಹಿಳೆಯರು ಅಲ್ಲಿ ನಡೆಸಿದ್ದ ಇಂಥ ಹೋರಾಟಗಳ ಪ್ರಗತಿಪರ, ಸಮಾಜವಾದಿ ಆಶಯಗಳು ಸ್ವತಂತ್ರ ಭಾರತದ ಸಂವಿಧಾನದಲ್ಲೂ ಸೇರಿದ್ದರಿಂದಾಗಿ ಭಾರತವು ಎಲ್ಲ ವಯಸ್ಕ ಸ್ತ್ರೀ ಪುರುಷರೂ ಸಮಾನ ನಾಗರಿಕರು ಎಂದು ಸಾರಿ, ಮತದಾನದಿಂದ ಹಿಡಿದು ಎಷ್ಟೋ ನಾಗರಿಕ ಹಕ್ಕುಗಳಿಗೆ ಮಹಿಳೆಯರೂ ಸಲ್ಲುವಂತಾಯಿತು. ಅದಕ್ಕಾಗಿ ಮಹಿಳೆಯರೇ ಪ್ರತ್ಯೇಕ ಹೋರಾಟ ಮಾಡಬೇಕಾಗಿ

ಬರಲಿಲ್ಲ ನಿಜ. ಆದರೆ ಶತಶತಮಾನದಿಂದ ಇಲ್ಲಿನ ಸಂಸ್ಕೃತಿಯನ್ನು ಆಳಿಕೊಂಡು ಬಂದ ಪಿತೃಪ್ರಧಾನ ವ್ಯವಸ್ಥೆಯ ಅಡಿಯಲ್ಲಿ ಜರುಗುತ್ತಿದ್ದ ಲಿಂಗತಾರತಮ್ಯಗಳ ವಿರುದ್ಧವಾಗಿ ಮಹಿಳೆಯರು ಎಚ್ಚರಗೊಂಡು ಮಹಿಳಾಚಳವಳಿಗಳನ್ನು ಆರಂಭಿಸಲು ನಾಲ್ಕುದಶಕಗಳವರೆಗೆ ಕಾಯಬೇಕಾಯ್ತು.

ಕಳೆದ ಎರಡು ಮೂರು ದಶಕಗಳಲ್ಲಿ ಮಹಿಳೆಯರ ಸಂಘಟಿತ ಹೋರಾಟಗಳು ಜನಾಂಗವಾದ, ಸಾಮ್ರಾಜ್ಯವಾದ, ಬಹುಲಿಂಗಸಂಬಂಧವಾದ (Heterosexualism) ಮತ್ತಿತರ ವಿವಿಧರೂಪದ ಶೋಷಣೆಗಳ ವಿರುದ್ಧವಾದ ಹೋರಾಟಗಳಾಗಿ ಬೆಳೆದಿವೆ. ಈ ಹೋರಾಟದ ಹುಟ್ಟು ಮತದಾನದ ಹಕ್ಕು, ಆರ್ಥಿಕ ಸಮಾನತೆಯ ಪ್ರಶ್ನೆಗಳಿಂದ ಆಗಿದ್ದರೂ ಇಂದು ಜಗತ್ತಿನಾದ್ಯಂತ ಈ ದಿನವು ಮಹಿಳೆಯರಿಗೆ ತುಂಬ ವಿಶಾಲವಾದ ಅರ್ಥವುಳ್ಳದ್ದಾಗಿದೆ. ಸಮಾನತೆ, ಶಾಂತಿ ಹಾಗೂ ಅಭಿವೃದ್ಧಿಗಳಿಗಾಗಿ ತಾವು ನಡೆಸುತ್ತಿರುವ ಹೋರಾಟದ ಹಾದಿಯಲ್ಲಿ ಎಷ್ಟು ಸಾಗಿಬಂದಿದ್ದೇವೆಂಬುದನ್ನು ವಿಮರ್ಶಿಸಿಕೊಳ್ಳುವ ಸಂದರ್ಭ ಇದು. ಹಾಗೆಯೇ ಅರ್ಥಪೂರ್ಣವಾದ ಪರಿವರ್ತನೆಗಾಗಿ ಸಂಘಟಿತರಾಗಲು, ಒಗ್ಗೂಡಲು ಇದೊಂದು ಅವಕಾಶವೂ ಹೌದು.

ಇತ್ತೀಚಿನ ದಶಕಗಳಲ್ಲಿ ಪುರುಷರಿಗೆ ಸರಿಸಮಾನವಾಗುವುದರಲ್ಲಿ ಜಾಗತಿಕವಾಗಿ ಮಹಿಳೆಯರು ಗಮನಾರ್ಹ ಪ್ರಗತಿ ಸಾಧಿಸಿದ್ದಾರೆ. ಶಿಕ್ಷಣಾವಕಾಶ, ಯೋಗ್ಯರೀತಿಯ ಆರೋಗ್ಯರಕ್ಷಣೆ ಅವಕಾಶಗಳು ಮಹಿಳೆಯರಿಗೆ ಲಭ್ಯವಾಗುತ್ತಿವೆ. ವೇತನ ಸಹಿತ ದುಡಿಮೆಯಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಮಹಿಳೆಯರು ಸೇರುತ್ತಿದ್ದಾರೆ. ಅನೇಕ ದೇಶಗಳಲ್ಲಿ ಮಹಿಳಾ ಸಮಾನತೆಯ ಆಶ್ವಾಸನೆ ನೀಡುವಂತಹ ಕಾನೂನುಗಳು ಹುಟ್ಟಿವೆ. ಮಹಿಳೆಯರ ಮಾನವೀಯ ಹಕ್ಕುಗಳನ್ನು ಗೌರವಿಸುವ ನೀತಿಯನ್ನು ಆ ದೇಶಗಳು ಸ್ವೀಕರಿಸಿವೆ ಎನ್ನುವುದು ಮಹಿಳೆಯರ 150 ವರ್ಷಗಳ ಹೋರಾಟದ ಉತ್ತಮ ಫಲಗಳೆನ್ನಬಹುದು.

ಆದರೆ, ಜಗತ್ತಿನ ಯಾವುದೊಂದು ಸ್ಥಳದಲ್ಲೂ ಮಹಿಳೆಯರು ಪುರುಷರಿಗಿರುವ ಎಲ್ಲ ಹಕ್ಕುಗಳು, ಅವಕಾಶಗಳೂ ತಮಗೂ ದಕ್ಕಿವೆ ಎಂದು ಹೇಳಿಕೊಳ್ಳುವ ಸ್ಥಿತಿಯಲ್ಲಿಲ್ಲ. ಅಂತರರಾಷ್ಟ್ರೀಯ ನೆಲೆಯಲ್ಲಿ ಅತ್ಯಂತ ಕಡುಬಡವರಲ್ಲಿ ಮಹಿಳೆಯರೇ ಹೆಚ್ಚಿನ ಪ್ರಮಾಣದಲ್ಲಿದ್ದಾರೆ. ಧಾರ್ಮಿಕ ಮೂಲಭೂತವಾದವು ಹೆಚ್ಚುತ್ತಿರುವುದರೊಂದಿಗೆ ಹಿಂದಿಗಿಂತಲೂ ಈಗ ಮಹಿಳೆಯರ ಶೋಷಣೆ ಹೆಚ್ಚಾಗಿದೆ. ನಗರಗಳ ಮಧ್ಯಮ ಹಾಗೂ ಮೇಲು ಆದಾಯದ ವರ್ಗಗಳ ಕುಟುಂಬಗಳಲ್ಲಿ ಮಹಿಳೆಯರ ಮೇಲಿನ ಹಿಂಸೆ, ಕ್ರೌರ್ಯಗಳು ತೀವ್ರವಾಗಿ ಸೂಕ್ಷ್ಮತರ ರೂಪಗಳಲ್ಲಿ ನಡೆದಿದ್ದು ಓದಿದವರು, ಉದ್ಯೋಗಸ್ಥರು, ಓದದವರು ಎಂಬ ವ್ಯತ್ಯಾಸವಿಲ್ಲದಂತೆ ಮೂಕವಾಗಿ ಮಹಿಳೆಯರು ಇಂಥ ಯಾತನೆಗಳನ್ನು ಅನುಭವಿಸುತ್ತಿದ್ದಾರೆ. ಜಾಗತೀಕರಣದೊಂದಿಗೆ ಮಹಿಳೆಯರನ್ನು ವೇಶ್ಯಾವಾಟಿಕೆಗಳಿಗೆ ರವಾನಿಸುವುದು, ವೇಶ್ಯಾವೃತ್ತಿಗೆ ಇಳಿಸುವುದೂ ಅನೂಹ್ಯಪ್ರಮಾಣದಲ್ಲಿ ಹೆಚ್ಚುತ್ತಿದೆ.

ಅಂತರರಾಷ್ಟ್ರೀಯ ಮಹಿಳಾ ಸಮ್ಮೇಳನಗಳು ಗುರುತಿಸಿರುವ ಪ್ರಕಾರ,

- ಜಗತ್ತಿನ ಅತ್ಯಂತ ಬಡವರಲ್ಲಿ 1.3 ಬಿಲಿಯನ್ ಜನ ಮಹಿಳೆಯರು.
- ಜಗತ್ತಿನಲ್ಲಿರುವ 960 ಮಿಲಿಯನ್ ನಿರಕ್ಷರಸ್ಥರಲ್ಲಿ 3/4 ಭಾಗ ಮಹಿಳೆಯರು.
- ಒಂದು ಸರಾಸರಿ ಗಣನೆಯ ಪ್ರಕಾರ ಜಗತ್ತಿನಲ್ಲಿ ಒಂದೇ ರೀತಿಯ ಕೆಲಸಕ್ಕಾಗಿ ಮಹಿಳೆಯರು ಪುರುಷರಿಗಿಂತ 30ರಿಂದ 40 ಪ್ರತಿಶತ ಕಡಿಮೆ ಸಂಬಳ ಪಡೆಯುತ್ತಾರೆ.
- ಅತ್ಯಾಚಾರ ಹಾಗೂ ಕೌಟುಂಬಿಕ ಹಿಂಸೆಗಳು ಮಹಿಳೆಯರನ್ನು ಅಂಗವಿಕಲರನ್ನಾಗಿ ಮಾಡಲೂ ಅವರ ಸಾವಿಗೂ ಪ್ರಮುಖ ಕಾರಣಗಳೆಂದು ಗುರುತಿಸಲ್ಪಟ್ಟಿವೆ.

1995ರಲ್ಲಿ ಬೀಜಿಂಗ್‌ನಲ್ಲಿ ನಡೆದ, 4ನೇ ವಿಶ್ವಮಹಿಳಾ ಸಮ್ಮೇಳನದ ಕ್ರಿಯಾ ವೇದಿಕೆ (Platform for Action) ಗುರುತಿಸಿರುವಂತೆ,

"ಮಹಿಳೆಯರ ಮುನ್ನಡೆ ಹಾಗೂ ಮಹಿಳೆಯರ ಮತ್ತು ಪುರುಷರ ಸಮಾನತೆಯ ಸಾಧನೆಗಳು ಮಾನವ ಹಕ್ಕುಗಳಿಗೆ ಸಂಬಂಧಿಸಿದ ವಿಷಯಗಳು; ಸಾಮಾಜಿಕ ನ್ಯಾಯಕ್ಕೆ ಅತ್ಯವಶ್ಯಕವಾದ ಷರತ್ತುಗಳಾದ ಇವುಗಳನ್ನು ಕೇವಲ ಮಹಿಳಾ ಸಮಸ್ಯೆಗಳೆಂದು ಪ್ರತ್ಯೇಕಿಸಿ ನೋಡುವಂತಿಲ್ಲ. ಒಂದು ಬಾಳಿಕೆಬರಬಹುದಾದ ನ್ಯಾಯಯುಕ್ತವೂ ಅಭಿವೃದ್ಧಿಗೊಂಡದ್ದೂ ಆದ ಸಮಾಜವನ್ನು ಕಟ್ಟಲು ಇರುವ ಏಕೈಕ ದಾರಿ ಎಂದರೆ ಅವುಗಳನ್ನು ಸಾಧಿಸುವುದೇ ಆಗಿದೆ."

ಮಹಿಳೆಯರು ಸರ್ವಶಕ್ತರಾಗದ ಹೊರತು, ಅವರ ಹಕ್ಕುಗಳೆಲ್ಲ ಅವರಿಗೆ ದೊರೆತ ಹೊರತು ಜಗತ್ತಿನ ತುಂಬ ಗಂಭೀರವಾದ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಸಮಸ್ಯೆಗಳು ನಿವಾರಣೆಗೊಳ್ಳುವುದು ಸಾಧ್ಯವಿಲ್ಲ. ಜಾಗತಿಕ ಶಾಂತಿಗಾಗಿ ಮತ್ತು ದೀರ್ಘ ಪ್ರಗತಿಗಾಗಿ, ಮಹಿಳೆಯರ ಹಕ್ಕುಗಳ ಪ್ರತಿಪಾದನೆ ಮತ್ತು ರಕ್ಷಣೆ ಅತ್ಯವಶ್ಯಕ. ಅಂತರರಾಷ್ಟ್ರೀಯ ಮಹಿಳಾದಿನವು ಮಹಿಳೆಯರ ಅಂತರರಾಷ್ಟ್ರೀಯ ಒಗ್ಗಟ್ಟಿನ ಹಾಗೂ ಜಾಗತಿಕ ಅರಿವಿನ ದಿನವಾಗಿದೆ. ಮಹಿಳೆಯರ ಸಾಧನೆಗಳನ್ನು ಆಚರಿಸುವುದರಲ್ಲಿ ಇನ್ನೂ ಆಗಬೇಕಾದ ಬದಲಾವಣೆಗಳ ಬಗ್ಗೆ ಗಮನವನ್ನು ಕೇಂದ್ರೀಕರಿಸುವುದು ಅತ್ಯಗತ್ಯ. ■

**ಪುತಿನ ಕಾವ್ಯ ಪ್ರಶಸ್ತಿಗೆ ಭಾಜನರಾದ ಸವಿತಾ ನಾಗಭೂಷಣ, ಬಿಜಾಪುರ ಮಹಿಳಾ ವಿಶ್ವವಿದ್ಯಾಲಯವು ಪತ್ರಿಕೋದ್ಯಮದಲ್ಲಿನ ಸಾಧನೆಗಾಗಿ ನೀಡುವ 'ಶ್ರೇಷ್ಠ ಪತ್ರಕರ್ತೆ' ಪ್ರಶಸ್ತಿಯನ್ನು ಪಡೆದ ಕೆ.ಸಾವಿತ್ರಿ ಹಾಗೂ ಹಲವು ವಿಶೇಷ ಪ್ರಶಸ್ತಿಗಳಿಗೆ ಭಾಜನರಾದ ಲೇಖಕಿಯರಿಗೆಲ್ಲ ಅಭಿನಂದನೆಗಳು.**

## ಒಳಗಿನ ಪುಟಗಳಲ್ಲಿ....



*ಈ ಸಂಚಿಕೆಯ ಪ್ರಾಯೋಜಕರು:*

**ಶ್ರೀಮತಿ ಸುಧಾಮೂರ್ತಿ**
ಇನ್‌ಫೋಸಿಸ್ ಫೌಂಡೇಷನ್

# ಶತಮಾನದಂಚಿನಲ್ಲಿ ಸ್ತ್ರೀವಾದಿ ಚಳವಳಿಯ ಒಂದು ಅವಲೋಕನ

*ಜಾಗತೀಕರಣದ ಇಂದಿನ ಸಾಮಾಜಿಕ - ರಾಜಕೀಯ ಹಾಗೂ ಆರ್ಥಿಕ ರಚನೆಗಳು ಮಹಿಳೆಯ ಬದುಕಿಗೆ ಅನೇಕ ಸವಾಲು, ಆತಂಕ, ಬಿಕ್ಕಟ್ಟುಗಳನ್ನು ಒಡ್ಡುತ್ತಿವೆ. ಮಹಿಳೆಯ ಸಮಸ್ಯೆಯ ಸ್ವರೂಪಗಳು ಸಂಕೀರ್ಣವಾಗುತ್ತಿವೆ. ಹಾಗಾಗಿ ಮಹಿಳಾ ಹೋರಾಟದ ಆದ್ಯತೆಗಳು ಹಾಗೂ ಸ್ತ್ರೀವಾದಿ ಧೋರಣೆಗಳ ಮರುಚಿಂತನೆ, ಪುನರ್ ವಿಮರ್ಶೆ, ಪುನರ್ ಮೌಲ್ಯೀಕರಣ ನಡೆಯುವ ಅಗತ್ಯವಿದೆ. ಈ ಹಿನ್ನೆಲೆಯಲ್ಲಿ 'ನಮ್ಮ ಮಾನಸ' 101ನೆಯ ಅಂತರ ರಾಷ್ಟ್ರೀಯ ಮಹಿಳಾ ವರ್ಷದ ವಿಶೇಷ ಸಂದರ್ಭದಲ್ಲಿ ಹಲವಾರು ಮಹಿಳೆಯರನ್ನು ಸಂಪರ್ಕಿಸಿತು. ವಿಭಿನ್ನ ಕ್ಷೇತ್ರದ ದುಡಿಯುವ ಮಹಿಳೆಯರು, ಲೇಖಕಿಯರು ಹಾಗೂ ಮಹಿಳಾ ಹೋರಾಟಗಾರರು ಇಂದಿನ ಮಹಿಳೆಯರ ಸ್ಥಿತಿ-ಗತಿ, ಮಹಿಳಾ ಹೋರಾಟದ ಆದ್ಯತೆಗಳು, ಸ್ತ್ರೀವಾದಿ ಚಿಂತನೆಯ ದಿಕ್ಕುಗಳ ಬಗ್ಗೆ ತಮ್ಮ ಧೋರಣೆ, ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಅವುಗಳನ್ನು ಸಂಗ್ರಹಿಸಿ ಇಲ್ಲಿ ಪ್ರಕಟಿಸಲಾಗಿದೆ. ಸಹಕರಿಸಿದ ಎಲ್ಲರಿಗೂ 'ನಮ್ಮ ಮಾನಸ' ಕೃತಜ್ಞತೆ ಸಲ್ಲಿಸುತ್ತದೆ.*

*-ಸಂ.ಮ.*

● **ಲಲಿತಾನಾಯಕ್**, ಹೋರಾಟಗಾರ್ತಿ, ಮಾಜಿ ಮಂತ್ರಿ

ಇವತ್ತಿನ ಸಂದರ್ಭದಲ್ಲಿ ಭ್ರಷ್ಟಾಚಾರ ಒಂದು ಮುಖ್ಯ ಸಮಸ್ಯೆಯಾಗಿದೆ. ಎಲ್ಲಿ ಹೋದರೂ ಲಂಚದ ಸಮಸ್ಯೆಯೇ. ಇದರ ಮೂಲಬೇರನ್ನು ಕಿತ್ತು ಹಾಕುವ ಮಟ್ಟದಲ್ಲಿ ಒಂದು ಆಂದೋಲನ ನಡೆಯಬೇಕಾಗಿದೆ. ಅಂತಹ ಜನಪರ ಆಂದೋಳನ ನಡೆದಾಗ ಮಾತ್ರ ಈ ಸಮಾಜದಲ್ಲಿ ಬದಲಾವಣೆ ಸಾಧ್ಯ. ಅಂತಹ ಜನಪರ ಆಂದೋಳನದ ಅಗತ್ಯ ಇಂದು ಇದೆ.

ಮಹಿಳೆಯರು ದೊಡ್ಡ ಮಟ್ಟದಲ್ಲಿ ಇಂದು ರಾಜಕಾರಣವನ್ನು ಪ್ರವೇಶಿಸುತ್ತಾ ಇದ್ದಾರೆ. ಅವರು ಈ ರಾಜಕಾರಣಕ್ಕೆ ಒಂದು ಹೊಸ ನೋಟವನ್ನು ನೀಡದೇ ಇದ್ದರೆ, ಹೊಸ ಭಾಷ್ಯ ಬರೆಯದೇ ಇದ್ದರೆ, ಮಹಿಳೆಯರು ರಾಜಕಾರಣ ಪ್ರವೇಶಿಸಿಯೂ ಪ್ರಯೋಜನವಾಗುವುದಿಲ್ಲ. ಪುರುಷ ಸಂಸ್ಕೃತಿಯ ರಾಜಕಾರಣ ಬೆಳೆಸಿಕೊಂಡು ಹೋಗುವುದರಲ್ಲಿ ಅರ್ಥವಿಲ್ಲ. ಹಾಗಾಗಿ ಮಹಿಳೆಯರು ಅರಿವಿನ ಮಟ್ಟ ಹೆಚ್ಚಿಸಿಕೊಂಡು ಒಂದು ಹೊಸ ರಾಜಕಾರಣದ ವ್ಯವಸ್ಥೆಯನ್ನು ರೂಪಿಸಬೇಕಾಗಿದೆ.

● **ಮೀರಾ ನಾಯಕ್, ಸಮತಾವೇದಿಕೆ, ಮೈಸೂರು**

ಜಾಗತಿಕವಾಗಿ ಮಹಿಳಾ ದಿನಾಚರಣೆಗೆ ನೂರು ವರ್ಷಗಳೇನೋ ತುಂಬಿವೆ. ಆದರೆ ಒಂದು ಶತಮಾನದಾಟಿದರೂ ಮಹಿಳೆಯರ ಮುನ್ನಡೆಯಲ್ಲಿ 20ನೇ ಶತಮಾನದ ಆದಿಯಲ್ಲಿ ಆದಂಥ ಸಾಧನೆಗಳಿಗೆ ಹೋಲಿಸಿದರೆ, ನಮ್ಮ ಇಂದಿನ ಸಾಧನೆ ಹೆಚ್ಚು ಎನ್ನಿಸಲಾರದು. ನಂಜನಗೂಡು ತಿರುಮಲಾಂಬಾ, ಕಲ್ಯಾಣಮ್ಮನಂಥವರು 100 ವರ್ಷ ಹಿಂದೆಯೇ ಮಹಿಳಾ ಚಳವಳಿಗೆ ಪೂರಕವಾಗಬಲ್ಲಂಥ ರೀತಿಯಲ್ಲಿ ಪುಸ್ತಕ ಪ್ರಕಟಣೆ, ಮಹಿಳಾ ಪತ್ರಿಕೆಗಳನ್ನು ನಡೆಸುವ ಸಾಹಸ ಮಾಡಿದ್ದರು. ಅವರಂಥ ಅನೇಕರ ಹೋರಾಟಗಳ ಫಲವಾಗಿ ಮಹಿಳೆಯರಿಗೆ ಶಿಕ್ಷಣದ ಅವಶ್ಯಕತೆ ಮಹತ್ವದ ಬಗ್ಗೆ ಅರಿವು ಉಂಟಾಯಿತು. ಕಳೆದ ಶತಮಾನದ ಕೊನೆಯಲ್ಲಿ ಆಗಿರುವ ಕಾನೂನು ಸುಧಾರಣೆಗಳೂ ಬಂದವು. ಆದರೂ 100% ವಿದ್ಯಾವಕಾಶ ಹೆಣ್ಣುಮಕ್ಕಳಿಗೆ ಇನ್ನೂ ಸಿಕ್ಕಿಲ್ಲ. 33% ಮೀಸಲಾತಿಯನ್ನು ನಿಜವಾಗಿ ಕಾರ್ಯಗತಗೊಳಿಸುವುದು 15-16 ವರ್ಷಗಳ ಮಹಿಳಾ ಹಕ್ಕೊತ್ತಾಯದ ನಂತರವೂ ಸಾಧ್ಯವಾಗಿಲ್ಲ. ಕಾರ್ಯಾಂಗ, ನ್ಯಾಯಾಂಗ, ಶಾಸಕಾಂಗಗಳಲ್ಲಿ ಈ 33% ಮೀಸಲಾತಿ ಜಾರಿಗೆ ಬಂದ ಹೊರತು ಮಹಿಳೆಯರ ಅಭಿವೃದ್ಧಿ ಸಾಧ್ಯವಾಗದು. ಈ ಕ್ಷೇತ್ರಗಳಲ್ಲಿ ಮಹಿಳೆಯರ ಭಾಗವಹಿಸುವಿಕೆ ಬಗ್ಗೆ ಅರಿವು ಪುರುಷರಿಗಿಲ್ಲ ಎಂಬುದಷ್ಟೇ ಅಲ್ಲ, ಮಹಿಳೆಯರೂ ಸ್ವತಃ ಇಂಥ ಅವಕಾಶ ಲಭ್ಯವಾದಾಗ ತಮ್ಮ ಹೊಣೆಗಾರಿಕೆ ಮಹಿಳೆಯರ ಪರವಾಗಿ ಇರಬೇಕು ಎಂಬುದನ್ನು ಅರ್ಥಮಾಡಿಕೊಳ್ಳಬೇಕು. ಬಾಲ್ಯವಿವಾಹದಂಥ ಸಮಾಜಘಾತುಕ ಪದ್ಧತಿಗಳೆಲ್ಲ ನಾಶವಾಗುವ ಬದಲು ಸರ್ಕಾರಗಳೇ ಮುಂದೆ ನಿಂತು ಅವುಗಳನ್ನು ನಡೆಸುವ ವ್ಯಂಗ್ಯ ಇಂದು ಉಂಟಾಗಿದೆ!

● **ಎಸ್.ಗಾಯತ್ರಿ, ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು**

ಸಮಾಜದಲ್ಲಿ ಚಳವಳಿಗಳು ಚಲನಶೀಲತೆಯ ಸಂಕೇತ; ಹರಿವ ನದಿಯಂತೆ. ಸಾಂದರ್ಭಿಕ ಒತ್ತಡಗಳಿಂದ ಅದರಲ್ಲಿ ಏರಿಳಿತಗಳು ಉಂಟಾಗಿ, ಅವು ಚಳವಳಿಯ ಸ್ವರೂಪ, ತೀವ್ರತೆ, ಗುಣಮಟ್ಟವನ್ನು ಪ್ರಭಾವಿಸುತ್ತವೆ. ಕಳೆದ ಮೂರು ದಶಕಗಳಲ್ಲಿ ವ್ಯಾಪಕವಾಗಿ ವಿಸ್ತರಿಸಿದ ಮಹಿಳಾ ಚಳವಳಿಯನ್ನು ಕುರಿತು ಮೆಲಕು ಹಾಕುತ್ತ ಇಂದಿನ ಸಮಕಾಲೀನ ಮಹಿಳಾ ಚಳವಳಿಯ ಸ್ಥಿತಿಗತಿಗಳನ್ನು ವಿಶ್ಲೇಷಿಸ ಹೊರಟಾಗ ಎದುರಾಗುವ ಪ್ರಶ್ನೆಗಳು ಹಲವಾರು: ಮಹಿಳಾ ಚಳವಳಿಯ ಮುಖ್ಯ ಅಜೆಂಡಾಗಳು, ಚಳವಳಿಯಲ್ಲಿ ಭಾಗಿಯಾಗುವವರ ಆದ್ಯತೆಗಳು, ಮಹಿಳಾಪ್ರಶ್ನೆಯ ವ್ಯಾಖ್ಯಾನ ಮತ್ತು ಚಳವಳಿಯನ್ನು ಪ್ರೇರಿಸುವ ಸಾಂದರ್ಭಿಕ ಒತ್ತಡಗಳನ್ನು ಚಳವಳಿ ಹೇಗೆ ನಿರ್ವಹಿಸುತ್ತದೆ ಎಂಬುದು.

ತುರ್ತುಪರಿಸ್ಥಿತಿ ಹುಟ್ಟುಹಾಕಿದ ಹೋರಾಟದ ಮನೋಭಾವದ ಜೊತೆಗೆ ಅಂತರರಾಷ್ಟ್ರೀಯ ಮಹಿಳಾ ವರ್ಷ ಮತ್ತು ವಿಸ್ತರಿಸಿದ ಮಹಿಳಾ ದಶಕಗಳು ಆರಂಭದ ಮಹಿಳಾ ಚಳವಳಿಗೆ ಪ್ರೇರಕ ಅಂಶಗಳಾದವು. ಪಿತೃಪ್ರಧಾನ್ಯತೆಯನ್ನು ತಮ್ಮ ಮುಖ್ಯ ಶತ್ರುವಾಗಿ ಗುರುತಿಸಿಕೊಂಡ ಮಹಿಳಾ ಚಳವಳಿಗಳು ಮೊದಲಿಗೆ ಕುಟುಂಬ, ವಿವಾಹದೊಳಗಿನ ಪಿತೃಪ್ರಧಾನತೆಯನ್ನು ಪ್ರಶ್ನಿಸಿದವು. ಅದಕ್ಕೆ ಸಂಬಂಧಪಟ್ಟ ಕಾನೂನಿನ ಜಾರಿಗೆ ಒತ್ತಾಯಿಸಿದವು. ಹೆಣ್ಣಿನ ಸಾಂಪ್ರದಾಯಿಕ ಪಾತ್ರ ಮತ್ತು ಸ್ಥಾನ ಮಾನಗಳನ್ನು ಪ್ರಶ್ನಿಸಿದವು. ಸಮಾಜದಲ್ಲಿ, ಕಲೆ, ಸಾಹಿತ್ಯ ಹಾಗೂ ಸಾಂಸ್ಕೃತಿಕ ಪರಿಸರದಲ್ಲಿ ಸ್ತ್ರೀಪರ ಸಂವೇದನೆ ಮತ್ತು ಮೌಲ್ಯಗಳಿಗಾಗಿ ಒತ್ತಾಯಿಸಿದವು. ವಿದ್ಯಾವಂತ ಮಧ್ಯಮ ವರ್ಗದ ಮಹಿಳಾ ಸಮುದಾಯ ಹುಟ್ಟಿಹಾಕಿದ ಈ ಚಳವಳಿ ಮಹಿಳಾ ಪ್ರಶ್ನೆಯನ್ನು ವ್ಯಾಖ್ಯಾನಿಸಿದ್ದು ಹೀಗೆ:

ಹೆಣ್ಣನ್ನು ಅವಳ ಜೈವಿಕ ವಿಶಿಷ್ಟತೆಗೇ ಸೀಮಿತಗೊಳಿಸಿ ಗುರುತಿಸುವ ಸಾಂಪ್ರದಾಯಿಕ ಚಿಂತನಾಕ್ರಮಕ್ಕೆ ಸವಾಲೊಡ್ಡಿ 'ಹೆಣ್ಣಿನ ಮೆದುಳು ಮನೆಗೆಲಸಕ್ಕೆ ಮಾತ್ರ ಮೀಸಲೆ?' ಎಂದು ಪ್ರಶ್ನೆ ಹಾಕಿದ ಆರಂಭದ ಮಹಿಳಾ ಚಳವಳಿ ಹೆಣ್ಣನ್ನು ಕುರಿತ ಚಿಂತನಾಕ್ರಮದ ಬದಲಾವಣೆಗೆ ಶ್ರಮಿಸಿದ್ದು, ಅವಳ ಬೌದ್ಧಿಕ ಸಾಮರ್ಥ್ಯ ಮತ್ತು ಸಾಧನೆಗೆ ಒತ್ತುಕೊಟ್ಟದ್ದು ಚಳವಳಿಯ ಮುಖ್ಯ ಭಾಗವಾಗಿತ್ತು. ಸಮಾಜದ ಮೂಲ ಘಟಕವಾದ ಕುಟುಂಬವೇ ಹೆಣ್ಣಿನ ದೌರ್ಜನ್ಯದ ಕಾರ್ಯಸ್ಥಾನವೆಂಬುದನ್ನು ಗುರುತಿಸಿದ್ದಲ್ಲದೆ, ಅದರ ಚಿಕಿತ್ಸೆಗೆ ಅಗತ್ಯವಾದ ಸಾಮಾಜಿಕ ಹೋರಾಟ, ಕಾನೂನಿನಲ್ಲಿ ಬದಲಾವಣೆ - ಇವು ಮಹಿಳಾ ಚಳವಳಿಯ ಮುಖ್ಯ ಅಜೆಂಡಾಗಳಾಗಿದ್ದವು.

ನಂತರದ ದಿನಗಳಲ್ಲಿ ಜಾಗತೀಕರಣ ಮತ್ತು ಮಾರುಕಟ್ಟೆ ಸಂಸ್ಕೃತಿ ಮಹಿಳಾ ಚಳವಳಿಯ ಸ್ವರೂಪವನ್ನೇ ಬದಲಾಯಿಸಿತು. ಸರ್ಕಾರಿ ಕಾರ್ಯಕ್ರಮಗಳು ಮತ್ತು ಯೋಜನೆಗಳು ಮಹಿಳಾ ಸಬಲೀಕರಣವನ್ನು

ತನ್ನ ಅಗತ್ಯಕ್ಕೆ ತಕ್ಕಂತೆ ರೂಪಿಸಿಕೊಳ್ಳುತ್ತಾ, ಚಳವಳಿಯನ್ನು ಹತ್ತಿಕ್ಕಿದವು. ಕೆಲವೊಮ್ಮೆ ಚಳವಳಿಯ ಅಜೆಂಡಾಗಳನ್ನು ತಮ್ಮ ಅಜೆಂಡಾಗಳಾಗಿ ಮಾಡಿಕೊಂಡು ಚಳವಳಿಕಾರರನ್ನು ತಮ್ಮ ಕಾರ್ಯಕ್ರಮದ ಪ್ರಚಾರಕರನ್ನಾಗಿಸಿದವು. ಆಗ ಹಕ್ಕುಗಳ ಸಮರ್ಥನೆ ಮತ್ತು ಸಮಾಜದಲ್ಲಿ ನೀತಿ ನಿರೂಪಕರಾಗುವುದಕ್ಕಿಂತ ಹೆಚ್ಚಾಗಿ ಮಹಿಳೆಯರು ಫಲಾನುಭವಿಗಳ ಪಾತ್ರಗಳಲ್ಲಿಯೇ ತೃಪ್ತಿಪಟ್ಟುಕೊಂಡುದುಂಟು. ಈ ಸಂದರ್ಭದಲ್ಲಿ ಮಾರುಕಟ್ಟೆ ಸಂಸ್ಕೃತಿಗೆ ಮಹಿಳೆ ಸರಕಾದಳು; ರಾಜಕಾರಣಿಗಳಿಗೆ ಓಟಿನ ಬ್ಯಾಂಕು ಆದಳು; ಅಧಿಕಾರಸ್ಥರಿಗೆ ಸಬಲೀಕರಣಕ್ಕೊಳಪಡಿಸಬೇಕಾದ ಸಾಧನವಾದಳು. ಈ ಸಂದರ್ಭದ ಮಹಿಳಾ ಚಳವಳಿಯ ಸವಾಲು ನಿಜಕ್ಕೂ ಕಠಿಣವಾದುದು. ಮಹಿಳೆಯ ಇಚ್ಛೆ ಅವಳದೋ ಅಥವಾ ಅವಳ ಮೇಲೆ ಹೊರಿಸಿದಂತಹದೋ ಎಂಬ ಬಲೆಯ ಸಿಕ್ಕಿನಿಂದ ಹೊರಬಂದು ಪಿತೃಪ್ರಧಾನತೆಯ ವಿರುದ್ಧ ಹೋರಾಡುವುದು ಮಹಿಳಾ ಚಳವಳಿಯ ಮುಖ್ಯ ಸವಾಲಾಗಿತ್ತು.

ಹಿಂದೆ ವ್ಯಾಖ್ಯಾನಗೊಳ್ಳುತ್ತಿದ್ದ ಮಹಿಳಾ ಪ್ರಶ್ನೆಯ ಮೂಲಭೂತ ತಾತ್ವಿಕತೆಯನ್ನೇ ಅಲುಗಾಡಿಸುವಂತಹ ಪ್ರಶ್ನೆಗಳು ಮತ್ತು ವಾದಗಳು ಇಂದು ಕೇಳಿಬರುತ್ತಿವೆ. ಹೆಣ್ಣಿನ ಜೈವಿಕ ವೈಶಿಷ್ಟ್ಯದ ವಿವಿಧ ಅಂಶಗಳನ್ನು ಆಧರಿಸಿಯೇ ತನ್ನ ಹಕ್ಕು ಸ್ಥಾಪಿಸುವ ಕೆಲವು ಚಳವಳಿಗಳು ಹುಟ್ಟಿಕೊಂಡಿವೆ. ಹೆಣ್ಣು–ಗಂಡಿನ ಸಂಬಂಧಗಳಲ್ಲದೆ ಅನ್ಯ ರೀತಿಯ ಲಿಂಗ ಸಂಬಂಧಗಳು, ಕುಟುಂಬ ವ್ಯವಸ್ಥೆಯಾಚೆಗಿನ ಲಿಂಗ ಸಂಬಂಧಗಳು ಮತ್ತು ಗಂಡು–ಹೆಣ್ಣಿನ ಸಂಬಂಧವನ್ನು ಒಂದು ವೃತ್ತಿಯನ್ನಾಗಿ ಪರಿಭಾವಿಸಬೇಕೆಂಬ ಚಳವಳಿಗಳು ನಮ್ಮ ನಡುವೆ ಕಂಡುಬರುತ್ತಿವೆ. ಅದು ಇಂದಿನವರೆಗೂ ವ್ಯಾಖ್ಯಾನಗೊಳ್ಳುತ್ತಿದ್ದ 'ಮಹಿಳಾ ಪ್ರಶ್ನೆ'ಯ ಮೂಲ ತಳಹದಿಯನ್ನು ಅಲುಗಾಡಿಸಿದೆ.

ಎಂದೂ ಮಹಿಳಾ ಚಳವಳಿ ಏಕಶಿಲಾಕಾರವಾದದ್ದು ಆಗಿರಲಿಲ್ಲ. ಇಂದೂ ಅದು ತನ್ನ ಬಹುಮುಖತೆಯ ಸ್ವರೂಪವನ್ನು ಪ್ರಸ್ತುತಪಡಿಸುತ್ತಲೇ, ಇಲ್ಲಿಯವರೆಗೆ ಮುಖ್ಯ ವಾಹಿನಿಯೊಳಗೆ ಗುರುತಿಸಿರದ ಹಲವಾರು ಚಳವಳಿಯ ಎಳೆಗಳನ್ನು ತನ್ನಲ್ಲಿ ಒಳಗೊಳ್ಳುವ ಪ್ರಯತ್ನವನ್ನು ಮಾಡುತ್ತಿದೆ. ಲಿಂಗ, ಜಾತಿ, ಧರ್ಮಗಳು ಇಂದು ವ್ಯಕ್ತಿಯ ಅಸ್ಮಿತೆಯನ್ನು ಗುರುತಿಸುವ ಅಂಶಗಳಾಗಿ ಅಸ್ಮಿತೆಯ ಸಮರ್ಥನೆ ಮತ್ತು ಅಂಚಿನ ನೆಲೆಯಲ್ಲಿರುವವರನ್ನು ಒಳಗೊಳ್ಳುವ ಪ್ರಕ್ರಿಯೆ ಒಟ್ಟಾಗಿ ಮಹಿಳಾ ಚಳವಳಿಯ ಭಾಗವಾಗಿದೆ. ಸರ್ಕಾರ, ಸೇನೆ, ಬಂಡವಾಳಶಾಹಿ, ಕುಟುಂಬ – ಇವೆಲ್ಲರೊಳಗೆ ಅಡಗಿರುವ ಪಿತೃಪ್ರಧಾನತೆಯ ವಿರುದ್ಧ ಹೋರಾಡುತ್ತಲೇ ಮಹಿಳಾ ಚಳವಳಿ ತನ್ನ ಹಾದಿಯನ್ನು ವಿಸ್ತರಿಸಿಕೊಳ್ಳುತ್ತಾ ಸಾಗಿದೆ. ಹೆಣ್ಣಿನ ದೇಹ ಮತ್ತು ಅದನ್ನು ಕುರಿತ ಸಾಮಾಜಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಆಯಾಮಗಳೊಂದಿಗೆ ಸಮುದಾಯಗಳಾಗಿ ಗುರುತಿಸಿ, ಗೌರವಿಸಬೇಕೆಂಬ ಚಳವಳಿಯು ಇದರ ನಡುವೆ ನಡೆದಿದೆ. ಪರಿಸರ ಸಂರಕ್ಷಣೆಯಲ್ಲಿ, ದೇಶದ ಸಂಪನ್ಮೂಲಗಳನ್ನು ಉಳಿಸಿಕೊಳ್ಳುವ ಹೋರಾಟದಲ್ಲಿ, 'ಅಭಿವೃದ್ಧಿಯ' ಹೆಸರಿನಲ್ಲಿ ನಡೆಯುತ್ತಿರುವ ಹಗಲು ದರೋಡೆಯನ್ನು ಪ್ರತಿಭಟಿಸುವ ಹೋರಾಟದಲ್ಲಿ, 'ಪ್ರಜಾಪ್ರಭುತ್ವ' ಶಬ್ದಕ್ಕೆ ಘನತೆಯನ್ನು ಕೊಡುವ ಹೋರಾಟದಲ್ಲಿ ಮಹಿಳೆಯರು ಸ್ವಯಂಪ್ರೇರಿತರಾಗಿ ಸಕ್ರಿಯವಾಗಿ ಭಾಗವಹಿಸುತ್ತಿದ್ದಾರೆ.



ಇಂದು ಮಹಿಳಾ ಚಳವಳಿಯ ಮುಂದಿರುವ ಸವಾಲೆಂದರೆ, ಲಿಂಗ ಸಮಾನತೆಯು ನಿಜವಾದ ಅರ್ಥದಲ್ಲಿ ಸಾಕಾರಗೊಳ್ಳುವ ಪ್ರಜಾಪ್ರಭುತ್ವವಾದಿ ಸಮಾಜ ಸೃಷ್ಟಿ ಮಾಡುವುದು. ಅದಕ್ಕೆ ಅಗತ್ಯವಾದ ಸೈದ್ಧಾಂತಿಕ ಸ್ಪಷ್ಟತೆಯು ಕ್ರಿಯಾಶಾಲಿ ಪ್ರಾಯೋಗಿಕತೆಯೊಂದಿಗೆ ಮಿಳಿತಗೊಂಡು ಸಮಾಜದ ಎಲ್ಲ ಜನವರ್ಗಗಳನ್ನು ಒಳಗೊಳ್ಳುವ **ಬಹುತೊರೆಯ ಬಿಡುಗಡೆಯ ಮಹಾನದಿಯಾಗಿ** ಸಾಗಬೇಕು.

## ● ವಿಮಲ, ಜನವಾದಿ ಮಹಿಳಾ ಸಂಘಟನೆ

ಮಹಿಳಾ ಪರವಾದ ಹೋರಾಟದಿಂದ ಅನೇಕ ಸುಧಾರಣೆಗಳಾಗಿವೆ ನಿಜ. ಆದರೆ ಜಾಗತೀಕರಣದ ಸಂದರ್ಭದಲ್ಲಿ ಭಾರತದಲ್ಲಿ ಕೋಮುವಾದ, ಜಾತೀಯತೆಗಳು ಮೇಲುಗೈ ಸಾಧಿಸಿವೆ. ಇವುಗಳ ವಿರುದ್ಧ ಹೋರಾಟ ನಡೆಸುವುದು ನಮ್ಮ ಆದ್ಯತೆ ಆಗಬೇಕಿದೆ. ವರದಕ್ಷಿಣೆಗಾಗಿ ಹಿಂದೆ ಬೀದಿಗಿಳಿದು ಪ್ರತಿಭಟನೆ ನಡೆದಿದೆ. ಇಂದಿಗೂ ವರದಕ್ಷಿಣೆಯ ಸಮಸ್ಯೆ ಇದೆ. ಆದರೆ ಚಳವಳಿಯ ಕಾವು ಕಡಿಮೆಯಾಗುತ್ತಿದೆ ಎನ್ನಲಾಗುತ್ತಿದೆ. ಜನವಾದಿ ಮಹಿಳಾ ಸಂಘಟನೆಗೆ ಇಂತಹ ಸಮಸ್ಯೆಯೇನೂ ಕಾಡಿಲ್ಲ. ಕಾನೂನುಗಳಿಂದಾಗಿ ಮಹಿಳೆಯರು ಸಮಾನತೆಯ ಹಾದಿಯಲ್ಲಿ ನಡೆಯುವಂತಹ ಅವಕಾಶ ಎದ್ದರೂ ಆ ಕಾನೂನುಗಳನ್ನು ಕಸಿದುಕೊಳ್ಳುವ, ಅವು ಸಿಗಲಾರದಂತೆ ತಡೆಯೊಡ್ಡುವ ಪ್ರಯತ್ನ ಈ ವ್ಯವಸ್ಥೆಯಲ್ಲಿ ನಡೆಯುತ್ತಲೇ ಇರುತ್ತದೆ.

ದುಡಿಯುವ ಅವಧಿಯನ್ನು 10 ಗಂಟೆ ಮಾಡುವುದರಿಂದ ಮಹಿಳಾ ಉದ್ಯೋಗಿಗಿರುವ ವೈಯಕ್ತಿಕ ಸ್ಪೇಸನ್ನು ಕಸಿದುಕೊಳ್ಳುವ ಹುನ್ನಾರ ನಡೆದಿದೆ. ಕಾನೂನಲ್ಲಿ ಓ.ಟಿ. ಎಂದರೂ ದುಡಿಮೆಗೆ ಸರಿಯಾದ ಪ್ರತಿಫಲವೇನೂ ಅಲ್ಲ. ಕೆಲವು ಸಂಘಟಿತ ಹಾಗೂ ಅಸಂಘಟಿತ ಕ್ಷೇತ್ರದ ಕಾರ್ಮಿಕರನ್ನು ಇನ್ನೂ ಹೆಚ್ಚು ದುಡಿಸುವುದೇ ಬಂಡವಾಳ ಶಾಹಿಗಳ ಹುನ್ನಾರಗಳಾಗಿರುತ್ತವೆ. ಈಗ ಕೆಲಸದ ಅವಧಿ 10 ಗಂಟೆ ಎಂದು ಕಾನೂನಿನ ರೀತಿಯೇ ಮಾಡಿಬಿಡುತ್ತಾರೆ. ಓ.ಟಿ. ಪ್ರಶ್ನೆ ಹಿಂದೆ ಸರಿದು ಬಿಡುತ್ತದೆ. ಅಂಗನವಾಡಿ ಕಾರ್ಯಕರ್ತೆಯರಿಗೆ 500 ರೂ. ಗೌರವ ಧನ ಹೆಚ್ಚಿಸಿ, 2 ಗಂಟೆ ಹೆಚ್ಚು ಕೆಲಸ ಮಾಡಿ ಎನ್ನುವಲ್ಲಿ ಯಾವ ನ್ಯಾಯವಿದೆ? ಗ್ರಾಮೀಣ ಪ್ರದೇಶದಲ್ಲಿ ಕೃಷಿ ಕುಸಿದು ಹೋಗುತ್ತಿದೆ. ಕೃಷಿ ನಂಬಿದ್ದ ಮಹಿಳೆಯರ ಬದುಕು ಅಸಹನೀಯವಾಗುತ್ತಿದೆ. ಮಹಿಳೆಯರ ಹೋರಾಟ ಎಂದರೆ ಪುರುಷ ವಿರೋಧಿ ಎಂದೇನೂ ಅಲ್ಲ. ಇಂದು ಮಹಿಳೆಯರ ಮೇಲಿನ ದೌರ್ಜನ್ಯದ ಸ್ವರೂಪಗಳು ಬದಲಾಗುತ್ತಿವೆ. ಸಮಸ್ಯೆಗಳ ಸ್ವರೂಪ ಸಂಕೀರ್ಣವಾಗಿದೆ. ಆ್ಯಸಿಡ್ ಎರಚುವುದು ಸಾಮಾನ್ಯವಾಗಿ ಬಿಟ್ಟಿದೆ. ಹಾಗಾಗಿ ಈಗ ನಾವು ನಿಂತಿರುವ ಕಾಲಘಟ್ಟದಲ್ಲಿ ಹೋರಾಟ ಮತ್ತಷ್ಟು ಗಟ್ಟಿಯಾಗಬೇಕಿದೆ. ಒಂದು ಪ್ರಜಾಪ್ರಭುತ್ವದ ಉಳಿವಿಗಾಗಿ ಸ್ತ್ರೀ–ಪುರುಷರಿಬ್ಬರೂ ಹೋರಾಟ ನಡೆಸುವ ಅಗತ್ಯ ಇದೆ.

## ● ವಿಮೋಚನಾ ಮಹಿಳಾ ಸಂಘಟನೆ, ಬೆಂಗಳೂರು

ಮಹಿಳೆಯರ ಬದುಕಿಗಿರುವ ಸವಾಲು, ಬಿಕ್ಕಟ್ಟು, ಪ್ರಶ್ನೆಗಳನ್ನು ಕುರಿತು ನಾವು ಮರು ಆಲೋಚಿಸುವ, ಮರು ವ್ಯಾಖ್ಯಾನಿಸುವ ಅಗತ್ಯ ಇಂದು ಇದೆ.

- ವಿವಾಹ, ಕುಟುಂಬದ ಸಂಸ್ಥೆಯನ್ನು ಮಹಿಳೆಯರ ಶೋಷಣೆಯ ಮೂಲ ಎಂದು ನಾವು ನಿರಾಕರಿಸುತ್ತಾ ಬಂದಿದ್ದಾಗ್ಯೂ ಇಂದಿನ ಸಂದರ್ಭದಲ್ಲಿ ಮಹಿಳೆಯರು ಈ ಸಂಸ್ಥೆಗೇ ಅಂಟಿಕೊಳ್ಳುತ್ತಿರುವುದನ್ನು ನಾವು ಗಮನಿಸಬೇಕು. ಇಂದಿನ ಜಾಗತೀಕರಣದ ಸಂದರ್ಭದಲ್ಲಿ ಈ ಸಂಸ್ಥೆಗಳಿಗೆ ವಿವಿಧ ರೂಪ, ವಿವಿಧ ಬಗೆಯಲ್ಲಿ ಮಹಿಳೆಯರು ಅಂಟಿಕೊಳ್ಳುತ್ತಿರುವುದರಿಂದ ಇದಕ್ಕೆ ಹೊಸ ರೀತಿಯ ಅಧಿಕೃತತೆ ಸಿಗುತ್ತಿದೆ. ವಿವಾಹಿತ ಸಂಸ್ಥೆ ತಾತ್ಕಾಲಿಕ, ಇಲ್ಲಿ ಮಹಿಳೆಗೆ ಭದ್ರತೆ ಇಲ್ಲ ಎನ್ನುವಂತಹ ಪ್ರಶ್ನೆ ಎತ್ತಿದ್ದಾಗ್ಯೂ ಇಂತಹವುಗಳನ್ನು ಪ್ರಶ್ನಿಸುವ, ಸವಾಲೆಂದು ಸ್ವೀಕರಿಸುವ ಧೋರಣೆ ನಮ್ಮ ಮಹಿಳೆಯರಲ್ಲಿ ಕಾಣುತ್ತಿಲ್ಲ. ಇದರಲ್ಲಿಯೇ ಒಂದು ರೀತಿಯ ತೃಪ್ತಿಯನ್ನು ನಮ್ಮ ಮಹಿಳೆಯರು ಕಂಡುಕೊಂಡಿದ್ದರೆ ನಾವು ಇಂದು ನಮ್ಮ ಧೋರಣೆಗಳನ್ನು ಮರುಪರಿಶೀಲಿಸಬೇಕಾಗಿದೆ. ಇಂದಿನ ಸಂದರ್ಭದಲ್ಲಿ ವಿವಾಹ

ಸಂಸ್ಥೆಯನ್ನು ಹೇಗೆ ಮರು ವ್ಯಾಖ್ಯಾನಕ್ಕೆ ಒಡ್ಡಬೇಕೆಂಬ ಸವಾಲು ನಮ್ಮ ಮುಂದೆ ಇದೆ.

- ಮಹಿಳಾ ಚಳವಳಿ personal is political ಎಂದು ಯಾವಾಗಲೂ ಹೋರಾಟ ನಡೆಸಿದೆ. 'ವೈಯಕ್ತಿಕ' ಎನ್ನುವುದನ್ನು ನಾವು ಸಾರ್ವಜನಿಕ ವಲಯಕ್ಕೆ ತಂದು ಹೋರಾಟ ನಡೆಸಿದ್ದೇವೆ. ಕಾನೂನುಗಳಿಗಾಗಿ ಬೇಡಿಕೆ ಇತ್ತಿದ್ದೇವೆ. ಆದರೆ ಕಾನೂನುಗಳೇ ಇಂದು ನಮ್ಮ ವೈಯಕ್ತಿಕ ಬದುಕಿನ ಮೇಲೆ ದಾಳಿ ಮಾಡಿ ಆ ಒಂದು ವೈಯಕ್ತಿಕ 'ಅವಕಾಶ' ವನ್ನು ಕಸಿದುಕೊಳ್ಳುವಂತಾಗಿದೆ. ಬದುಕಿನ ಪ್ರತಿಯೊಂದು ಅಂಶಕ್ಕೂ ಕಾನೂನು ಮೊರೆ ಹೋಗುವಂತಹ ಧೋರಣೆ ಬೆಳೆಯುತ್ತಿದೆ. ಮನುಷ್ಯರ ನಡುವಿನ ಸಂಬಂಧ, ಮೌಲ್ಯಗಳಿಗೆ, ನೈತಿಕತೆಗಳಿಗೆ ಈ ಹೊತ್ತಿನಲ್ಲಿ ಅರ್ಥವೇ ಇಲ್ಲದಂತಾಗಿದೆ. ಕಾನೂನಿನ ಮೇಲೆ ಅವಲಂಬನೆ ಹೆಚ್ಚಾಗಿದೆಯೇ ಹೊರತು ಮನುಷ್ಯ ಸಂಬಂಧಗಳ ಮೇಲಲ್ಲ. ಹಾಗಾಗಿ ವೈಯಕ್ತಿಕ, ರಾಜಕೀಯ ಎನ್ನುವುದನ್ನು ಮರುಪರಿಶೀಲನೆಗೆ ಒಡ್ಡುವ ಸವಾಲು ನಮ್ಮ ಮುಂದಿದೆ.

  ವೈಯಕ್ತಿಕ, ರಾಜಕೀಯ ಎಂಬುದನ್ನು ಈ ಹೊತ್ತಿನಲ್ಲಿ ಮಾರುಕಟ್ಟೆಯ ಒತ್ತಡಗಳು ನಿರ್ಧರಿಸುತ್ತಿರುವ ಸಂದರ್ಭ ನಮ್ಮ ಮುಂದೆ ಇದೆ. ಮಹಿಳೆಯ ಸಬಲತೆಯ ವಿವಿಧ ಮಾದರಿಗಳನ್ನು ಈ ಮಾರುಕಟ್ಟೆಯ ಒತ್ತಡಗಳು ನಮ್ಮ ಮುಂದೆ ಇಡುತ್ತಿವೆ. ಮಾರುಕಟ್ಟೆ ರೂಪಿಸಿರುವ ರಾಚನಿಕ ಹಿಂಸೆಯು ಈ ಹೊಸ ಮಾದರಿಯ ಮಹಿಳೆಯ ಸಬಲತೆ ಯಲ್ಲಿ ಅಡಗಿದೆ. ಇಂತಹ ಸಂಕೀರ್ಣ ಸಂದರ್ಭದಲ್ಲಿ ಮಾರುಕಟ್ಟೆಯ ಒತ್ತಡಗಳು ರೂಪಿಸಿರುವ ರಾಜಕೀಯಕ್ಕೆ ನಮ್ಮ 'ವೈಯಕ್ತಿಕ ಸ್ಪೇಸ್'ಅನ್ನು ಬಿಟ್ಟು ಕೊಡಬೇಕೇ ಎಂಬುದನ್ನು ನಾವು ಮರುಪರಿಶೀಲಿಸುವ, ಮರು ವ್ಯಾಖ್ಯಾನಿಸುವ, ಮರು ವಿಮರ್ಶಿಸುವ ಸವಾಲು ನಮ್ಮ ಮುಂದೆ ಇದೆ.

- 'ಸಂಸ್ಕೃತಿ'ಯ ಬಗ್ಗೆ ಕೂಡಾ ಇಂತಹದೇ ಸವಾಲನ್ನು ನಾವು ಎದುರಿಸ ಬೇಕಾಗಿದೆ. 'ಪಿತೃಪ್ರಧಾನ' ಎಂದು ನಾವು ಸಂಸ್ಕೃತಿಯನ್ನು ಹಿಂದೆ ತಿರಸ್ಕರಿಸಿರಬಹುದು. ಈ ಸಂಸ್ಕೃತಿ ನಾಲ್ಕು ಗೋಡೆಯ ಒಳಗೇ ಮಹಿಳೆಯರನ್ನು ಬಂಧಿಸುತ್ತದೆ ಎಂದಿದ್ದೇವೆ. ಆದರೆ ಇಂದಿನ ಸಂದರ್ಭದಲ್ಲಿ ರಾಜಕೀಯ ಹಾಗೂ ಮಾರ್ಕೆಟ್ force ಗಳು ಸಂಸ್ಕೃತಿಯನ್ನು ತಮ್ಮದಾಗಿಸಿಕೊಳ್ಳುತ್ತಾ ಹೊಸ ಬಗೆಯ 'ಮಹಿಳಾ ಮಾದರಿ'ಯ ಸಬಲತೆಯ ಜೊತೆಗೆ ಹೊಸ ಬಗೆಯ 'ಅಧಿಕಾರ'ದ ಕಲ್ಪನೆಯನ್ನು ನಮ್ಮ ಮುಂದೆ ಇಡುತ್ತಿವೆ. ಅವುಗಳನ್ನು ಒಪ್ಪಿಕೊಳ್ಳ ಬೇಕೆನ್ನುವ ಒತ್ತಡವನ್ನು ಹೇರುತ್ತಿವೆ. ನಮ್ಮ ಹಳೆಯ ಸಂಸ್ಕೃತಿಯ ಒಳಿತನ್ನು ಹೊಸ ದೃಷ್ಟಿಕೋನದಿಂದ ನಮ್ಮದಾಗಿಸಿಕೊಳ್ಳುವ ಅಗತ್ಯ ಇಂದು ಇದೆ. ಹಾಗೆ ಮಾಡುತ್ತಲೇ ಹೊಸ ಬಗೆಯ ಮಹಿಳೆಯರ ಸಬಲತೆಯ ಮಾದರಿಗಳನ್ನು ಪ್ರಶ್ನಿಸುವ ಅಗತ್ಯವೂ ಇದೆ. 'ಅಧಿಕಾರ' ಹೊಸ ಬಗೆಯಾಗಿ ನಿರ್ವಚನೆಯಾಗಬೇಕಿದೆ. ನಾವು ಹೇಳುವ ಮಹಿಳೆಯ ಸಬಲತೆ, ಮಹಿಳೆಯ ಅಧಿಕಾರದಲ್ಲಿ ಇಡಿಯ ಸಮಾಜ ಬದಲಿಸುವ ವಿಶಾಲವಾದ ಒಂದು ದೃಷ್ಟಿಕೋನವನ್ನು ಒಳಗೊಂಡಿರ ಬೇಕು. ಆಗ ಮಾತ್ರ 'ಅಧಿಕಾರ' ಹಾಗೂ ಸಬಲೀಕರಣಕ್ಕೆ ಹೊಸ ಅರ್ಥ ಬರುತ್ತದೆ. ಈ ಅರ್ಥದಲ್ಲಿ ಸಂಸ್ಕೃತಿಯನ್ನು ಈಗಿರುವ ಮಾರ್ಕೆಟ್ ಒತ್ತಡ, ರಾಜಕೀಯಗಳಿಂದ ಬಿಡಿಸಿಕೊಂಡು ವಶಪಡಿಸಿ ಕೊಳ್ಳುತ್ತಲೇ ಅಧಿಕಾರ, ಸಬಲತೆಯ ಮರು ವ್ಯಾಖ್ಯಾನ ಮಾಡುವ ಸವಾಲು ನಮ್ಮ ಮುಂದೆ ಇದೆ.

**ನೀಲಾಂಜನ, ಸ್ವಾಯತ್ತ ಮಹಿಳಾ ಚಳವಳಿಯ ಕಾರ್ಯಕರ್ತೆ**

ನಾವು ಇಂದು ಬದುಕುತ್ತಿರುವ ಆರ್ಥಿಕ, ಸಾಮಾಜಿಕ ಸಂದರ್ಭದಲ್ಲಿ ಅತ್ಯಂತ ಬಡವರ ಶ್ರಮಶಕ್ತಿಯಿಂದ ಸಂಪತ್ತನ್ನು ಸೂರೆಗೊಳ್ಳುತ್ತಿರುವ ಒಂದು ಹೊಸ ವರ್ಗದ ಸೃಷ್ಟಿಯಾಗಿದೆ. ನಗರ ಪ್ರದೇಶದ ಮಧ್ಯಮವರ್ಗ, ಮೇಲ್ವರ್ಗಗಳು ಈಗಿರುವ ಆರ್ಥಿಕ ಮಾದರಿಯ ಲಾಭ ಪಡೆದು ಹೊಸವರ್ಗದ ಸೃಷ್ಟಿಗೆ ಕಾರಣರಾಗಿದ್ದಾರೆ. ಈಗಿರುವ ಆರ್ಥಿಕ ಮಾದರಿ ಅತ್ಯಂತ ಬಡವರ ಮೇಲೆ ನಡೆಸುತ್ತಿರುವ ಆರ್ಥಿಕ ಹಿಂಸೆಯಿಂದಾಗಿ ಅವರು ಮುಖವೇ ಇಲ್ಲದ ಬಡತನದ ರೇಖೆಯ ಕೆಳಗೆ ತಳ್ಳಲ್ಪಡುತ್ತಿದ್ದಾರೆ. ಅವರ ಹಕ್ಕುಗಳನ್ನು ಸಂಪೂರ್ಣವಾಗಿ ನಾಶಮಾಡಲಾಗಿದೆ. ಈ ಆರ್ಥಿಕ ಮಾದರಿಯಿಂದಾಗಿ ಉಲ್ಬಣವಾಗುತ್ತಿರುವ ಹಿಂಸೆ ಎಲ್ಲಾ ವರ್ಗದ ಮಹಿಳೆಯರ ಮೇಲೂ ತನ್ನ ಕಬಂಧ ಬಾಹುಗಳನ್ನು ಚಾಚಿದೆ. ಅತಿಯಾದ ಬೆಲೆ ಏರಿಕೆ, ಎಣ್ಣೆ ಉತ್ಪನ್ನಗಳ ಕೊರತೆ, ಹಣದುಬ್ಬರ, ರೈತರ ಸಾವು ಇಂತಹವುಗಳಿಗೆಲ್ಲ ಕಾರಣ ಇಂದಿನ ಆರ್ಥಿಕ ಮಾದರಿಯೇ. ಹಾಗಾಗಿ ಸ್ವಾಯತ್ತ ಮಹಿಳಾ ಸಂಘಟನೆಗಳು ತಮ್ಮ ಆದ್ಯತೆಗಳನ್ನು ಮರುಪರಿಶೀಲಿಸ ಬೇಕಾಗಿದೆ. ಆರ್ಥಿಕ ಲಾಭಕ್ಕಾಗಿಯೇ ಹೋರಾಟ ಎನ್ನುವಂತಹ ಟ್ರ್ಯಾಪ್ ಒಳಗೆ ಬೀಳದೇ ನಾವು ದುಡಿಯುವ ವರ್ಗದ, ಅತ್ಯಂತ ಬಡ ಮಹಿಳೆಯರ ಹೋರಾಟದ ಜೊತೆಗೆ ಒಗ್ಗೂಡುವುದು ಇಂದಿನ ಜರೂರಿಯ ವಿಷಯವಾಗಿದೆ. ಈ ನಿಟ್ಟಿನತ್ತ ಸ್ವಾಯತ್ತ ಮಹಿಳಾ ಸಂಘಟನೆಗಳು ಆಲೋಚಿಸಬೇಕಾಗಿದೆ.

**ಪ್ರತಿಭಾ, ಗಾರ್ಮೆಂಟ್ ಕಾರ್ಮಿಕರ ಸಂಘಟನೆ 'ಮುನ್ನಡೆ' ಸಂಸ್ಥೆ, ಬೆಂಗಳೂರು**

ಮಾರ್ಚ್ 8ರ ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆಗೆ ಚಾರಿತ್ರಿಕವಾಗಿ ಕಾರಣವಾದ 1857ರ ಹೋರಾಟಕ್ಕೆ ಕಾರಣರಾದವರು ಗಾರ್ಮೆಂಟ್ಸ್ ಮಹಿಳೆಯರು. ಆದರೆ ಇಂದು ಅವರ ಸ್ಥಿತಿ-ಗತಿಗಳು ಶೋಚನೀಯವಾಗಿವೆ.

- ಕೆಲಸದ ಸ್ಥಳದಲ್ಲಿ ಗೌರವ, ಘನತೆ ಬೇಕು ಎಂಬುದನ್ನು ನಾವು ಕೇಳುತ್ತಲೇ ಬಂದಿದ್ದೇವೆ. ಮಹಿಳೆ ಎಂಬ ಕಾರಣಕ್ಕೆ ನಮ್ಮನ್ನು ಕೀಳಾಗಿ ನಡೆಸಿಕೊಳ್ಳುವುದನ್ನು ನಿಲ್ಲಿಸಬೇಕು.
- ಇಲ್ಲಿಯವರೆಗೆ ಒಂದು ಗಂಟೆಯ ಕಾಲ ಮಾತ್ರ ಓ.ಟಿ. ಮಾಡಿಸಿಕೊಳ್ಳಬಹುದೆಂದು ಕಾನೂನಿನಲ್ಲಿ ಇತ್ತು. ಈಗ ಸರ್ಕಾರದವರು ಓ.ಟಿ.ಯನ್ನೂ ಎರೆಡು ಗಂಟೆಯ ಅವಧಿಗೆ ಹೆಚ್ಚಿಸಬೇಕೆಂದಿದ್ದಾರೆ. ಆದರೆ ಕಾರ್ಮಿಕರಿಗೆ ಈ ಹೆಚ್ಚಿನ ಅವಧಿಯ ಕೆಲಸವೇ ಬೇಡ. ಒಂದು ಗಂಟೆ ಓ.ಟಿ. ಅಂದರೆ 2 ಗಂಟೆ ಕೆಲಸ ಮಾಡಿಸುತ್ತಾರೆ. 2 ಗಂಟೆ ಅಂದರೆ ಮೂರು ಗಂಟೆ ಹೆಚ್ಚು ದುಡಿಮೆ ಮಾಡಿಸಿಕೊಳ್ಳುತ್ತಾರೆ. 2 ಗಂಟೆಯ ಅವಧಿಗೆ ಕಾನೂನಿನ ಸಮ್ಮತಿ ಸಿಕ್ಕರೆ ಕಾರ್ಮಿಕರ ಮೇಲೆ ಇನ್ನೂ ಹೆಚ್ಚಿನ ಒತ್ತಡ, ಹೊರೆಗಳು ಬೀಳುತ್ತವೆ. ಹಾಗಾಗಿ ಹೆಚ್ಚಿನ ಅವಧಿಯ ಕೆಲಸವೇ ಬೇಡವೆಂದು ಮಾರ್ಚ್ 8ರ ಅಂತರರಾಷ್ಟ್ರೀಯ ಮಹಿಳಾ ದಿನದಂದು ನಾವು ಹೋರಾಟ ನಡೆಸುತ್ತಿದ್ದೇವೆ.
- ನಮಗೆ ಈಗ ದಿನಕ್ಕೆ ಇರುವ ವೇತನ 141/- ರೂ. ಈ ಮಹಾನಗರದಲ್ಲಿ ಇದರಿಂದ ಜೀವನ ನಡೆಸಲು ಸಾಧ್ಯವಿಲ್ಲ. ಹಾಗಾಗಿ ದಿನಕ್ಕೆ ಕನಿಷ್ಠ 250/- ರೂ.ಗಳನ್ನಾದರೂ ಕೊಡಬೇಕೆಂಬ ಬೇಡಿಕೆಯನ್ನು ನಾವು ಮುಂದಿಡುತ್ತಿದ್ದೇವೆ.



**ಜಯಮ್ಮ, ಪೌರಕಾರ್ಮಿಕ ಮಹಿಳೆ**

ಈ ಬದುಕು, ಜೀವನ ಕಷ್ಟ. ಬೆಳಿಗ್ಗೆ 5-6 ಗಂಟೆಗೆ ಮನೆ ಬಿಡ್ತೀವಿ. ಇದರಿಂದಾಗಿ ನಮ್ಮ ಮಕ್ಕಳ ಭವಿಷ್ಯ, ಜೀವನ ಹಾಳಾಗುತ್ತಿದೆ. ಇಂತಹ ವೃತ್ತಿ ನಮ್ಮ ಮಕ್ಕಳು-ಮೊಮ್ಮಕ್ಕಳಿಗೂ ಬೇಡ ಅಂತ ನನ್ನ

ಅನಿಸಿಕೆ. ನಾವು ಸಂಘಟನೆ ಮೂಲಕ ಹೋರಾಟ ನಡೆಸಿದ್ದಕ್ಕೆ 600 ರಿಂದ 2300 ರೂ.ವರೆಗೆ ಸಂಬಳ ಹೆಚ್ಚು ಆಯ್ತು. ಆದರೆ ಆ ಸಂಬಳ ಕೈಗೆ ಸಿಕ್ತಾಇಲ್ಲ, ಏಕೆ? ಸಮಸ್ಯೆಗಳ ಪರಿಹಾರಕ್ಕೆ ಸಂಘಟನೆ ಇರಬೇಕು. ಆದರೆ ಕಾರ್ಮಿಕರು ಬಲವಾಗಿ ಹೋರಾಡಬೇಕೆಂದರೆ ಕಾರ್ಮಿಕರನ್ನು ಒಗ್ಗೂಡಿಸಿ ಕರೆದುಕೊಂಡು ಹೋಗುವ ಸಂಘಟನೆ, ಸಂಘಟನೆಯ ನಾಯಕತ್ವ ಮುಖ್ಯವಾಗುತ್ತದೆ. ಅದು ನಮ್ಮ ಇಂದಿನ ಜರೂರಿಯ ಅಗತ್ಯವೂ ಕೂಡಾ.

**ಶರೀಫ ಕೆ, ಲೇಖಕಿ**

ಮಹಿಳೆ ಶೈಕ್ಷಣಿಕವಾಗಿ ಪ್ರಗತಿ ಸಾಧಿಸಿದ್ದಾಳೆ. ದುಡಿಯುವ ವರ್ಗದ ಮಹಿಳೆಯರಲ್ಲೂ ಹಲವಾರು ಪ್ರಗತಿಗಳಾಗಿವೆ. ಆದರೆ ಕೋಮುವಾದ ಹಾಗೂ ಭಯೋತ್ಪಾದನೆಯಿಂದಾಗಿ ಮಹಿಳೆಯರು ಬಸವನ ಹುಳು ಶಂಕುವೊಳಗೇ ಮುದುಡಿಕೊಳ್ಳುವಂತೆ ಮುದುಡಿಕೊಳ್ಳತೊಡಗಿದ್ದಾರೆ. ಗಾಂಧೀಜಿಯವರ ರಾಜಕಾರಣದ ಸಂದರ್ಭದಲ್ಲಿ ಮಹಿಳೆಯರಿಗೆ ಒಂದು ಮಟ್ಟಿನ ಸ್ವಾತಂತ್ರ್ಯ ಇತ್ತು. ಆದರೆ ಈ ಹೊತ್ತಿನ ಕೋಮುವಾದದ ಒತ್ತಡದಿಂದಾಗಿ ಅಲ್ಪ ಸಂಖ್ಯಾತ ಮಹಿಳೆಯರು ಧಾರ್ಮಿಕ ಕಂದಾಚಾರಗಳಿಗೆ, ಮೂಢನಂಬಿಕೆಗಳಿಗೆ ಒಳಗಾಗುವಂತೆ ಅವರ ಪುರುಷ ವರ್ಗವೇ ಒತ್ತಡ ಹೇರುವಂತಾಗಿದೆ. ಆಕೆಯ ಮಾನಸಿಕ ಸ್ಥಿತಿ ಅಸಮತೋಲನವಾಗುವಂತಹ ಒಂದು ಸಾಂಸ್ಕೃತಿಕ ವಾತಾವರಣವನ್ನು ಕೋಮುವಾದ ನಿರ್ಮಾಣ ಮಾಡಿದೆ. ಬುರ್ಖಾ ಹಾಕುವುದು ಇವತ್ತು ಫ್ಯಾಶನ್ ಆಗಿದೆ. ಕೋಮುವಾದದ ಶಕ್ತಿಯಿಂದ ಅತಿ ಧಾರ್ಮಿಕತೆಯನ್ನು ಒಪ್ಪಿಕೊಳ್ಳುವಂತಹ ಒತ್ತಡಕ್ಕೆ ಅಲ್ಪಸಂಖ್ಯಾತ ಮಹಿಳೆ ಒಳಗಾಗಿದ್ದಾಳೆ.

**ಸರಸ್ವತಿ ದು., ಲೇಖಕಿ/ಕಾರ್ಯಕರ್ತೆ**

ಮಹಿಳಾ ಚಳವಳಿಯ ಪ್ರಸ್ತುತತೆ ಇಂದಿಗೂ ಇದೆ. ಸ್ವಾಯತ್ತ ಮಹಿಳಾ ಚಳವಳಿ ಪ್ರಜಾಪ್ರಭುತ್ವ, ಸಮಾನತೆ, ಪ್ರತಿಯೊಬ್ಬರ ಅನನ್ಯತೆ, ಶ್ರೇಣೀಕೃತ ವ್ಯವಸ್ಥೆಯ ವಿರುದ್ಧ ಯಾವಾಗಲೂ ಮಾತನಾಡಿದೆ. ಇಂತಹ ರಾಜಕೀಯ ದೃಷ್ಟಿಕೋನ ಅನನ್ಯ ಎಂದು ನಾನು ಭಾವಿಸುತ್ತೇನೆ. ನಾವು ನಮ್ಮನ್ನು ಹಾಗೂ ಎಲ್ಲವನ್ನೂ ಮರುಅವಲೋಕನ ಮಾಡಿಕೊಳ್ಳುವುದನ್ನು ಮುಖ್ಯ ಎಂದು ಭಾವಿಸಬೇಕು.

ಈಚೆಗೆ ವಾರ್ಧಾದಲ್ಲಿ ನಡೆದ ಸಂಕಿರಣದಲ್ಲಿ ಕ್ರಿಯಾಶೀಲತೆ/ವೈಚಾರಿಕತೆ ಒಟ್ಟಿಗೆ ಇರಬೇಕಾದ ಬಗ್ಗೆ ಪ್ರಸ್ತಾಪವನ್ನೆತ್ತಿದ್ದಾರೆ. ಇದನ್ನು ಸ್ವಾಯತ್ತ ಮಹಿಳಾ ಚಳವಳಿ ಹಿಂದಿನಿಂದಲೂ ಹೇಳುತ್ತಾ ಬಂದಿದೆ. ವೈಚಾರಿಕತೆ ಎನ್ನುವುದು ನಮ್ಮ ಬದುಕಿನ ವಾಸ್ತವಗಳ ಹಿನ್ನೆಲೆಯಲ್ಲಿ ಮೂಡಿಬರಬೇಕು.

ತಳವರ್ಗದ ಸಮುದಾಯದ ಒಟ್ಟಿಗೆ ಧ್ವನಿ ಸೇರಿಸುವುದು ಅಗತ್ಯ. ಕೂಲಿಕಾರ್ಮಿಕರು, ಅಸಂಘಟಿತ ಕ್ಷೇತ್ರದ ಕಾರ್ಮಿಕರು, ದಲಿತರು, ಆದಿವಾಸಿಗಳ ಧ್ವನಿಯಾಗಿ ಅವರ ಹೋರಾಟಗಳಲ್ಲಿ ಮಹಿಳಾ ಚಳವಳಿ ಬೆಂಬಲವಾಗಿ ಇರಬೇಕು. ಆದರೆ ಮಹಿಳಾ ಚಳವಳಿ ಆ ಚೈತನ್ಯವನ್ನು ಎಷ್ಟರಮಟ್ಟಿಗೆ ತೆಗೆದುಕೊಳ್ಳಬೇಕೋ ಅಷ್ಟರಮಟ್ಟಿಗೆ ತೆಗೆದುಕೊಂಡಿಲ್ಲ ಎಂದೇ ನನ್ನ ಅನಿಸಿಕೆ.

ನಿಂತ ನೆಲಕ್ಕೆ ಬೇರೂರಿ ನಾವು ಕೆಲಸ ಮಾಡಬೇಕು. ಲಿಂಗ ಸಂಬಂಧದ ಆಚೆ ಕೂಡಾ ನಮ್ಮ ದೃಷ್ಟಿಕೋನ ವಿಶಾಲವಾಗಿ ಇರಬೇಕು. ಅಂದರೆ 'ಅಸ್ಮಿತೆಯ ರಾಜಕೀಯ' ಬೇಡ ಎಂದಲ್ಲ. ಸರಕು ಸಂಸ್ಕೃತಿ, ಜಾಗತೀಕರಣ, ಇಂಪೀರಿಯಲಿಸಂ ವಿರೋಧಿಸಿಕೊಂಡೇ ಮಹಿಳಾ ಚಳವಳಿ ಬೆಳೆದಿದೆ. ಅದು ವಾಸ್ತವಕ್ಕೂ ಪ್ರಸ್ತುತವೇ. ವ್ಯಕ್ತಿಯಾಗಿ ಒಳ-ಹೊರಗುಗಳನ್ನು ಆತ್ಮಾವಲೋಕನ ಮಾಡುತ್ತಾ ಹೋಗುವುದೂ ಮುಖ್ಯ. ಜೀವಪರತೆ, ವಿಶ್ವ ಮಾನವ ಚಿಂತನೆ ನಮ್ಮ ಆಶಯಗಳಾಗಿರಬೇಕು.

**ಮಲ್ಲಿಗೆ, ಮಹಿಳಾ ಸಮಾನತಾ ವೇದಿಕೆ**

ಇತ್ತೀಚೆಗೆ ಗಮನಿಸಿದರೆ ಮಹಿಳೆಯರು ತಮ್ಮ ಅಸ್ತಿತ್ವದ ಸುತ್ತ ಸಂಘಟಿತರಾಗೋದು ಕಡಿಮೆ ಆಗಿದೆ ಅನ್ನುತ್ತೆ. ಶೈಕ್ಷಣಿಕ ವಲಯದಲ್ಲಿಯೂ ಬಹಳ ಜನ ಮಹಿಳೆಯರು post feminist ಅನ್ನುವಂತಹ ಚಟುವಟಿಕೆ ಅಧ್ಯಯನಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದಾರೆ. ಈ ಹೊತ್ತಿನಲ್ಲಿ ಸ್ತ್ರೀಶಕ್ತಿ, ಸಾಲ, ಮಹಿಳಾ ಸಬಲತೆಯ ಗುಂಪುಗಳು ಇಂತಹ ಮಹಿಳಾ ಗುಂಪುಗಳನ್ನು ಹೆಚ್ಚಾಗಿ ಕಾಣುತ್ತೇವೆ. ಇಂತಹ ಮಹಿಳಾ ಗುಂಪುಗಳಿಗೆ ದುಡ್ಡು-ಕಾಸು ನೀಡುತ್ತಾ ಸರ್ಕಾರ co-opt ಮಾಡುವುದನ್ನು ನೋಡಬಹುದು. ಮಹಿಳೆಯರು ಮನೆಯಿಂದ ಈಚೆ ಬರೋದಕ್ಕೆ ಇಂತಹ ಗುಂಪುಗಳು ಸಹಕಾರಿಯಾಗಿರಬಹುದು. ಆದರೆ 'ಮಹಿಳಾ ಹಕ್ಕುಗಳ' ರಾಜಕೀಯ ಕಲ್ಪನೆ ಇಲ್ಲಿ ಕಾಣಿಸೋದಿಲ್ಲ ಸ್ತ್ರೀವಾದಿ ರಾಜಕೀಯದ ಹೋರಾಟ 80ರ ದಶಕದಲ್ಲಿ ಪ್ರಬಲವಾಗಿತ್ತು. ಅದು ಇವತ್ತು ಹಿನ್ನೆಲೆಗೆ ಸರಿದಿದೆ. ಒಂದು ರೀತಿಯಲ್ಲಿ ಹಳತು ಎನ್ನುವುದು ಕೇಳಿಬರುತ್ತಿದೆ. ಪ್ರಸ್ತುತದ ಸಂದರ್ಭದಲ್ಲಿ ಸ್ತ್ರೀವಾದಿ ರಾಜಕೀಯದ ಮಹತ್ವವಿದೆ. ಪ್ರಸ್ತುತ ಸಂದರ್ಭಕ್ಕೆ ಪ್ರಸ್ತುತತೆ ಅಳವಡಿಸಿಕೊಂಡು 80ರ ದಶಕದ ಸ್ತ್ರೀವಾದಿ ಚಳವಳಿಯ ಕಾವು ಮತ್ತೆ ಮೂಡಿ ಬರಬೇಕಾಗಿದೆ. ಸಮಾನತಾ ಮಹಿಳಾ ವೇದಿಕೆಯ ಇಂದಿನ ಆದ್ಯತೆ ಮಹಿಳೆಯರನ್ನು ಅವರವರ ಅಸ್ತಿತ್ವದ ಹಾಗೂ ಅವರ ಹಕ್ಕುಗಳ ಸುತ್ತ ಸಂಘಟಿಸುವುದಾಗಿದೆ. ❑

## 'ಅಂತರರಾಷ್ಟ್ರೀಯ ಮಹಿಳಾದಿನ' ನಡೆದು ಬಂದ ಹಾದಿ



*1857ರ ಮಾರ್ಚ್ 8ರಂದು ನ್ಯೂಯಾರ್ಕ್ ಪಟ್ಟಣದ 'ಗಾರ್ಮೆಂಟ್ಸ್, ಟೆಕ್ಸ್‌ಟೈಲ್ಸ್'ನಲ್ಲಿ ಕೆಲಸ ಮಾಡುವ ಮಹಿಳೆಯರು ಕೆಲಸದ ಶೋಚನೀಯ ಸ್ಥಿತಿ-ಗತಿ, ಕಡಿಮೆ ಸಂಬಳ ವಿರೋಧಿಸಿ ಬೀದಿಗಿಳಿದು ಪ್ರತಿಭಟಿಸಿದರು. 1908ರಲ್ಲಿ 15000 ಮಹಿಳೆಯರು ನ್ಯೂಯಾರ್ಕ್ ಪಟ್ಟಣದ ಬೀದಿಗಳಲ್ಲಿ ಕೆಲಸದ ಕಡಿಮೆ ಅವಧಿಗಾಗಿ, ಉತ್ತಮ ಸಂಬಳಕ್ಕಾಗಿ, ಮತದಾನದ ಹಕ್ಕಿಗಾಗಿ ಒತ್ತಾಯಿಸಿ ಬೀದಿಗಿಳಿದು ತಮ್ಮ ಧ್ವನಿ ಎತ್ತಿದ್ದರು. 1910ರಲ್ಲಿ ಕೋಪನ್‌ಹೇಗನ್‌ನಲ್ಲಿ ದುಡಿಯುವ ಮಹಿಳೆಯರ ಎರಡನೆಯ ಅಧಿವೇಶನ ನಡೆದಿತ್ತು. ಜರ್ಮನಿಯ ಸೋಷಿಯಲ್ ಡೆಮಾಕ್ರೆಟಿಕ್ ಪಾರ್ಟಿಯ ಮಹಿಳಾ ವಿಭಾಗದ ನಾಯಕಿಯಾಗಿದ್ದ ಕ್ಲಾರಾ ಜಟ್‌ಕಿನ್ ಅಂತರರಾಷ್ಟ್ರೀಯ ಮಹಿಳಾದಿನದ ವಿಚಾರವನ್ನು ಪ್ರಸ್ತಾಪಿಸಿದ್ದರು. ತಮ್ಮ ಬೇಡಿಕೆಗಳನ್ನು ಮುಂದಿಡಲು, ಒತ್ತಾಯಿಸಲು ಮಾರ್ಚ್ 8ನ್ನು ಮಹತ್ವದ ದಿನವಾಗಿ, ಚಾರಿತ್ರಿಕ ಹೋರಾಟದ ದಿನವಾಗಿ ಎಲ್ಲಾ ದೇಶಗಳಲ್ಲಿ ಹಾಗೂ ಎಲ್ಲಾ ಭಾಗಗಳಲ್ಲಿ ಆಚರಿಸಬೇಕೆಂಬುದು ಕ್ಲಾರಾ ಜಟ್‌ಕಿನ್‌ರವರ ಆಶಯವಾಗಿತ್ತು. 1911ರಲ್ಲಿ ಟ್ರಯಾಂಗಲ್ ಶರ್ಟ್ ವೇಸ್ಟ್ ಫ್ಯಾಕ್ಟರಿಯ ಫೈರ್ ದುರಂತದಲ್ಲಿ 140 ಜನ ಗಾರ್ಮೆಂಟ್ಸ್ ಮಹಿಳೆಯರು ಅಸುನೀಗಿದಾಗ ಮತ್ತೆ ಗಾರ್ಮೆಂಟ್ಸ್ ಮಹಿಳೆಯರು ಧ್ವನಿ ಎತ್ತಿದ್ದರು. 1913ರಲ್ಲಿ ರಷ್ಯಾದಲ್ಲಿ ಫೆಬ್ರವರಿ ಮಾಹೆಯ ಕೊನೆಯ ಭಾನುವಾರವನ್ನು ಅಂತರರಾಷ್ಟ್ರೀಯ ಮಹಿಳಾ ದಿನವೆಂದು ಆಚರಿಸಿ 1ನೇ ಮಹಾಯುದ್ಧದ ಕಾಲದಲ್ಲಿ, ಶಾಂತಿಯನ್ನು ಕಾಪಾಡಬೇಕೆಂಬ ಬೇಡಿಕೆಯಿಟ್ಟು ಮಹಿಳೆಯರು ರಷ್ಯಾದ ಬೀದಿಗಳಲ್ಲಿ ಮೆರವಣಿಗೆ ನಡೆಸಿದ್ದರು. ಅಂತಿಮವಾಗಿ 1911ರಲ್ಲಿ ಅಂತರರಾಷ್ಟ್ರೀಯ ಮಹಿಳಾ ದಿನವನ್ನು ಘೋಷಣೆ ಮಾಡಲಾಯಿತು. 1919ರಲ್ಲಿ ರಷ್ಯಾದ ಕ್ರಾಂತಿಯ ಸಂದರ್ಭದಲ್ಲಿಯೇ ಬೋಲ್‌ಷೆವಿಕ್ ಸ್ತ್ರೀವಾದಿ ಅಲೆಕ್ಸಾಂಡ್ರಾ ಕೊಲಾಂತೆ ಅವರು ಮಾರ್ಚ್ 8ನ್ನು ರಜೆಯ ದಿನವಾಗಿ ಘೋಷಿಸಬೇಕಾಗಿ ಲೆನಿನ್‌ಗೆ ಬೇಡಿಕೆ ಇತ್ತಿದ್ದರು. 1965ರ ಮಾರ್ಚ್ 8ರಲ್ಲಿ ಸೋವಿಯತ್ ರಷ್ಯಾ ಅಂತರರಾಷ್ಟ್ರೀಯ ಮಹಿಳಾ ದಿನವನ್ನು ರಜೆಯ ದಿನವೆಂದು ಘೋಷಿಸಿದಾಗ - ಸೋವಿಯತ್ ರಷ್ಯಾದಲ್ಲಿ 'ರಾಷ್ಟ್ರದ ಒಳಿತಿಗಾಗಿ ದುಡಿದ ಮಹಿಳೆಯರ ಕೊಡುಗೆಗಳ ಸ್ಮರಣೆಗಾಗಿ' ಎಂಬ ನಿರ್ಣಯವೊಂದರ ಮೂಲಕ ಅಂತರರಾಷ್ಟ್ರೀಯ ಮಹಿಳೆಯರ ದಿನವನ್ನು ರಜೆಯ ದಿನವೆಂದು ಘೋಷಿಸಿದ್ದಾರೆ.*




# 'ಮಹಿಳೆ ಮತ್ತು ಹಿಂಸೆ'
## ಒಂದು ಸಂವಾದ

**ದಿನಾಂಕ 12-2-2011ರಂದು ನಮ್ಮ ಮಾನಸ ಪತ್ರಿಕೆಯು "ಮಹಿಳೆ ಮತ್ತು ಹಿಂಸೆ" ಕುರಿತು ಸಂವಾದವನ್ನು ಏರ್ಪಡಿಸಿತ್ತು. ಹೆಚ್ಚು ಯುವ ವಿದ್ಯಾರ್ಥಿನಿಯರು ಈ ಸಂವಾದದಲ್ಲಿ ಭಾಗವಹಿಸಿದ್ದು ಒಂದು ವಿಶೇಷ. ಈ ಕಾರ್ಯಕ್ರಮವನ್ನು ಕೆನರಾಬ್ಯಾಂಕ್ ಸೋಷಿಯಲ್ ಬ್ಯಾಂಕಿಂಗ್ ಸೆಲ್ ಪ್ರಾಯೋಜಿಸಿತ್ತು.**

ಜಾಗತೀಕರಣದಿಂದಾಗಿ ಮಹಿಳೆಯರ ಮೇಲೆ ನಡೆಯುತ್ತಿರುವ ಹಿಂಸೆಯ ಸ್ವರೂಪವೇ ವಿಭಿನ್ನವಾಗಿದೆ ಎನ್ನುತ್ತಾ ಹಿಂಸೆಯ ವಿವಿಧ ಮುಖಗಳನ್ನೂ ಕುರಿತು ಪ್ರಸ್ತಾವಿಕ ಮಾತುಗಳನ್ನಾಡಿದ ಮಾನಸ ಬಳಗದ ಎಚ್.ಎಸ್. ಚಂಪಾವತಿಯವರು ಭ್ರೂಣಹತ್ಯೆ ಲಿಂಗತಾರತಮ್ಯ ಆರ್ಥಿಕ ಸ್ವಾತಂತ್ರ್ಯ ಮುಂತಾದ ವಿಷಯಗಳನ್ನು ಪುನರ್ವ್ಯಾಖ್ಯಾನಿಸುವ ಅಗತ್ಯವಿದೆ. ಅದೇ ಇಂದಿನ ಸಂವಾದದ ಉದ್ದೇಶ ಎಂದರು.

ಕೆನರಾಬ್ಯಾಂಕ್ ಸೋಷಿಯಲ್ ಬ್ಯಾಂಕಿಂಗ್ ಸೆಲ್‌ನ ಮುಖ್ಯಸ್ಥರಾದ ಶ್ರೀ ಪ್ರೇಮನಾಥ್‌ರವರು ಇಂದಿನ ಸಮಾಜದಲ್ಲಿ ಪುರುಷರು 'ಸ್ವಾತಂತ್ರ್ಯ'ವನ್ನು ಅರ್ಥೈಸುವುದಕ್ಕೂ ಮಹಿಳೆಯರು ಸ್ವಾತಂತ್ರ್ಯವನ್ನು ಅರ್ಥೈಸುವುದಕ್ಕೂ ಅಜಗಜಾಂತರ ವ್ಯತ್ಯಾಸವಿದೆ. ಮಹಿಳೆಯಲ್ಲಿರುವ ಶಕ್ತಿ ಹಾಗೂ ಸಾಮರ್ಥ್ಯವನ್ನು ಗುರುತಿಸಬೇಕಾಗಿದ್ದು ಅತ್ಯಗತ್ಯವಾಗಿದೆ. ಈ ದೃಷ್ಟಿಯಿಂದ ಗ್ರಾಮೀಣ ಮಹಿಳೆಯರನ್ನು ಗಮನಿಸಬೇಕು ಎನ್ನುತ್ತಾ ಕೆಲವು ನಿದರ್ಶನಗಳನ್ನು ನೀಡಿದರು.

ಮೊದಲನೆಯ ಗೋಷ್ಠಿಯಲ್ಲಿ ಮಾತನಾಡಿದ ಕವಿತಾರವರು (ಹೆಸರು ಬದಲಿಸಿದೆ) ಧಾರವಾಡದ ತಮ್ಮ ಜೀವನದ ಅನುಭವವನ್ನು ಹಂಚಿಕೊಳ್ಳುತ್ತಾ, ತಮ್ಮ ಬಾಲ್ಯ, ವಿದ್ಯಾಭ್ಯಾಸ ನೀಡುತ್ತಾ, ಬಾಲ್ಯದ ಜೀವನ ವಿವಾಹದ ನಂತರ ಬದಲಾವಣೆಯಾದುದನ್ನು ವಿವರಿಸಿದರು. ವಿವಾಹದ ನಂತರ ಕುಟುಂಬದಲ್ಲಿ ತಾವು ಅನುಭವಿಸಿದ ನೋವು, ದೌರ್ಜನ್ಯವನ್ನು ವಿವರಿಸುತ್ತಾ, ಮೊದ ಮೊದಲು ಇಂತಹ ಹಿಂಸೆಯಿಂದ ಅಘಾತವಾಯಿತು. ಹೇಗೆ ಅದರಿಂದ ಹೊರಬರಲು ಹಂತ ಹಂತವಾಗಿ ಪ್ರಯತ್ನಿಸಿದೆಯೆನ್ನುತ್ತಾ ಹನ್ನೆರಡು ವರ್ಷಗಳ ಕಾಲದ ತಮ್ಮ ಬದುಕಿನ ಹೋರಾಟವನ್ನು, ಅನುಭವವನ್ನು ಹಂಚಿಕೊಂಡರು. ವಿವಾಹ ವಿಚ್ಛೇದನ ತೆಗೆದುಕೊಳ್ಳುವುದು ಅನಿವಾರ್ಯವಾದದ್ದು, ಪತಿ ಬೇರೆ ಮದುವೆಯಾದದ್ದು ಹಾಗೂ ಮಗುವಿನ ಹಕ್ಕಿಗಾಗಿ ಇಂದೂ ಹೋರಾಡುತ್ತಿರುವುದು, ಕ್ಷುಲ್ಲಕ ಕಾರಣಕ್ಕಾಗಿ ಆತ ತಮ್ಮ ಮೇಲೆ ಪದೇ ಪದೇ ಕೇಸ್ ಹಾಕುತ್ತಾ ಹಿಂಸೆ ನೀಡುತ್ತಿರುವುದು, ತಾವು ಇನ್ನೂ ನಡೆಸುತ್ತಿರುವ ಕಾನೂನಿನ ಹೋರಾಟವನ್ನು ಕವಿತ ಹಂಚಿಕೊಂಡರು.

ತಮ್ಮ ಮೇಲೆ ನಡೆದ ಅಮಾನುಷ ಹಿಂಸೆಯನ್ನು ಕುರಿತು ಮಾತನಾಡಿದ ಭಾಗ್ಯರವರು (ಹೆಸರು ಬದಲಿಸಿದೆ) "ಕಷ್ಟಗಳು ಜೀವನದಲ್ಲಿ ಬರುತ್ತವೆ, ಅವುಗಳನ್ನು ಎದುರಿಸುವ ಧೈರ್ಯವನ್ನು ಬೆಳೆಸಿಕೊಳ್ಳಬೇಕು. ಸಮಸ್ಯೆಗೊಂದು ಪರಿಹಾರವಿದ್ದೇ ಇರುತ್ತದೆ. ಅದನ್ನು ಹುಡುಕಿಕೊಳ್ಳಬೇಕು. ನಮ್ಮ ಸಮಸ್ಯೆಯನ್ನು ಬೇರೆಯವರ ಹತ್ತಿರ ಹೇಳಿಕೊಳ್ಳಬೇಕು, ಅದನ್ನು ಒಳಗೇ ಇಟ್ಟುಕೊಳ್ಳಬಾರದು, ಇದಕ್ಕೆ ಉತ್ತಮ ನಿದರ್ಶನ ನಾನೇ" ಎಂದು ವಿದ್ಯಾರ್ಥಿನಿಯರಿಗೆ ಧೈರ್ಯ ತುಂಬಿ ತಮ್ಮ ಮಾತುಗಳನ್ನು ಪ್ರಾರಂಭಿಸಿದರು.

ಆಕೆ ಬಡ ಕುಟುಂಬದಿಂದ ಬಂದವರು, ಚಿಕ್ಕವಯಸ್ಸಿನಲ್ಲಿ ತಂದೆಯನ್ನು ಕಳೆದುಕೊಂಡು ಕಷ್ಟಪಟ್ಟು ವಿದ್ಯಾಭ್ಯಾಸವನ್ನು ಮುಗಿಸಿ ಕೆಲಸಕ್ಕೆ ಸೇರಿದರು. ಚಿಕ್ಕವಯಸ್ಸಿನಲ್ಲೇ ಮದುವೆಯಾಗಿ ಗಂಡನಮನೆ ಸೇರಬೇಕಾಯಿತು. ಆಕೆಯ ಗಂಡನೋ ಪ್ರಳಯಾಂತಕ. ಆತ ಕಪ್ಪು ಎಂದರೆ ಹೆಂಡತಿ, ಅದು ಬಿಳಿಯಾಗಿದ್ದರೂ ಕಪ್ಪು ಎಂದು ಒಪ್ಪಿಕೊಳ್ಳಬೇಕು. ಆತ ಹಾಕಿದ ಗೆರೆಯನ್ನೂ ದಾಟುವಂತಿಲ್ಲ. ಒಂದು ರೂಪಾಯಿಗೂ ಆತನೆದುರು ಕೈ ಚಾಚಬೇಕು. ಕೆಲಸಕ್ಕೆ ಹೋಗುವಾಗ ಮನೆಗೆ ಬೀಗ ಹಾಕಿಕೊಂಡು ಹೊರಡುತ್ತಿದ್ದನು. ನಾಲ್ಕು ಗೋಡೆಯೊಳಗೆ ಆಕೆಯ ಬದುಕು. ಆತನ ಅಪ್ಪಣೆಯಿಲ್ಲದೆ ಆಕೆ ಹೊಸಿಲು ದಾಟುವ ಹಾಗಿಲ್ಲ. ಆತನಿಗೆ ಎದುರು ಮಾತನಾಡುವ ಹಾಗಿಲ್ಲ. ಹಾಗೆ ಉಸಿರೆತ್ತಿದರೆ ಆಕೆಯ ಮೈಮೇಲೆ ಬಾಸುಂಡೆಗಳು! ಹೀಗೆ ಒಂದು ಮಗುವಾದ ಮೇಲೆ ಆ ಮಗುವನ್ನು ಶಾಲೆಗೆ ಬಿಡಲು ಹೋದ ಸಂದರ್ಭದಲ್ಲೇ ಆಕೆ ಮನೆಯಿಂದ ಹೊರಬಂದಿದ್ದು. ಅಲ್ಲಿ ಭೇಟಿಯಾದ ಗೆಳತಿಯರ ನೆರವಿನಿಂದ, ಆಕೆ ಟೈಲರಿಂಗ್ ಕಲಿತು ಅನಂತರ ಕಂಪ್ಯೂಟರ್ ಶಿಕ್ಷಣವನ್ನೂ ಪಡೆದಳು. ಕ್ರಮೇಣ ಆಕೆಗೆ ಮಾನಸ ಬಳಗದ ಗೆಳತಿಯರ ಪರಿಚಯವಾಯಿತು. ಬದುಕಿನಲ್ಲಿನ ಧೈರ್ಯ ಹಾಗೂ ಆತ್ಮವಿಶ್ವಾಸ ಅವಳಲ್ಲಿ ಇಮ್ಮಡಿಯಾಯಿತು. ಆತ ನೀಡಿದ ದೈಹಿಕ ಹಿಂಸೆಯನ್ನು ಅಕ್ಷರಗಳಲ್ಲಿ ವರ್ಣಿಸಲು ಸಾಧ್ಯವಾಗುವುದಿಲ್ಲ. ಅಂಥ ಹಿಂಸೆಯನ್ನು ಸಹಿಸಿ ತನ್ನ ಕಾಲಮೇಲೆ ತಾನು ನಿಲ್ಲುವ ಸಾಮರ್ಥ್ಯ ಪಡೆದುಕೊಂಡದ್ದೇ ಒಂದು ಸಾಹಸ.

"ಯಾರೂ ದುಡುಕಿ ನಿರ್ಧಾರ ತೆಗೆದುಕೊಳ್ಳಬೇಡಿ. ಮಾನಸ ನನಗೆ ಬದುಕುವ ಹೋರಾಡುವ ಆತ್ಮವಿಶ್ವಾಸವನ್ನು, ಧೈರ್ಯವನ್ನು ತುಂಬಿದೆ. ಆತ್ಮಹತ್ಯೆಯಂತಹ ನಿರ್ಧಾರ ಸಮಸ್ಯೆಗೆ ಪರಿಹಾರವಲ್ಲ. ಹೆಮ್ಮೆಯಿಂದ ಬದುಕಬಲ್ಲ ಜೀವನ ನನಗೆ ಸಿಕ್ಕಿದೆಯೆಂದರೆ ಅದು ಮಾನಸ ಬಳಗದಿಂದ. ಅವರಿಗೆ ನಾನು ತುಂಬು ಹೃದಯದಿಂದ ಧನ್ಯವಾದ ಹೇಳುತ್ತೇನೆ" ಎಂದು ಮಾತು ಮುಗಿಸಿದರು.

ಅಲಸೂರು ಗೇಟ್ ಪೊಲೀಸ್ ಠಾಣೆಯಲ್ಲಿ ಆರಕ್ಷಕರಾಗಿ ಕಾರ್ಯ ನಿರ್ವಹಿಸುತ್ತಿರುವ ಶ್ರೀಮತಿ ಅಂಜುಮಾಲ ಬಿ. ನಾಯಕ್‌ರವರು ಗುಣಾತ್ಮಕ ಭಾವನೆಗಳನ್ನು ಜೀವನದಲ್ಲಿ ಬೆಳೆಸಿಕೊಳ್ಳಬೇಕು ಎಂದು ಪ್ರಾರಂಭಿಸಿ ವಿದ್ಯಾರ್ಥಿನಿಯರಿಗೆ ಉಪಯುಕ್ತವಾದ ಮಾಹಿತಿಯನ್ನು ನೀಡಿದರು. ಭಾರತ ದಂಡ ಸಂಹಿತೆ ಕುರಿತು ಪ್ರತಿಯೊಬ್ಬರು ಸೂಕ್ತವಾದ ಮಾಹಿತಿಯನ್ನು ಪಡೆಯಲೇಬೇಕು ಎಂದು ನುಡಿದ ಅವರು ಬೇರೆ

ಬೇರೆ ಹಂತದಲ್ಲಿ ಹೆಣ್ಣುಮಕ್ಕಳ ಮೇಲೆ ನಡೆಯುವ ದೌರ್ಜನ್ಯವನ್ನು ಗುರುತಿಸುತ್ತಾ ಮನೆಯಲ್ಲಿ, ಶಾಲೆಗಳಲ್ಲಿ, ದುಡಿಯುವ ಸ್ಥಳದಲ್ಲಿ ನಡೆಯುವ ಲೈಂಗಿಕ ದೌರ್ಜನ್ಯಗಳ ನಿದರ್ಶನಗಳನ್ನು ನೀಡಿದರು. ಭ್ರೂಣಹತ್ಯೆಯನ್ನು ಕುರಿತು ವಿವರವಾಗಿ ಮಾತನಾಡುತ್ತಾ, ಭ್ರೂಣಹತ್ಯೆಗಳನ್ನು ತಡೆಯಲು ಸಂಬಂಧಪಟ್ಟ ಕಾನೂನಿದೆ. ಆದರೆ ಮಹಿಳೆಯರೇ ಇದನ್ನು ತಡೆಯುವುದು ಜರೂರಾಗಿದೆಯೆಂದು ಒತ್ತಿ ಹೇಳಿದರು. ಹದಿಹರೆಯದ ಹೆಣ್ಣುಮಕ್ಕಳು ಸಿನಿಮಾ ಹಾಗೂ ಮಾಧ್ಯಮಗಳ ಪ್ರಭಾವಕ್ಕೆ ಒಳಗಾಗಿ ಪುರುಷರ ದೌರ್ಜನ್ಯಕ್ಕೆ ಬಲಿಯಾಗುತ್ತಿರುವುದನ್ನು ಪ್ರಸ್ತಾಪಿಸುತ್ತಾ ಇಂತಹ ಸಮಸ್ಯೆಗಳನ್ನು ಮುಚ್ಚಿಡದೇ ಹಿರಿಯರಲ್ಲಿ ಹೇಳಿ, ಪೊಲೀಸ್ ಠಾಣೆಗೆ ದೂರು ನೀಡಬೇಕೆಂದರು. ಮದುವೆ ಒಂದು ವ್ಯಾಪಾರವಾಗಿದೆ, ವರದಕ್ಷಿಣೆ ಬೇಡವೆಂಬ ನಾಟಕ ಮಾಡುತ್ತ ಆಡಂಬರದ ಮದುವೆಗೆ ಒತ್ತಾಯಿಸುವ ಹೆಣ್ಣಿನ ತಂದೆ-ತಾಯಿಯರಿಗೆ ನೀಡುವ ಹಿಂಸೆ, ವರದಕ್ಷಿಣೆ ಸಮಸ್ಯೆ ಮುಂತಾದ ವಿಷಯಗಳನ್ನು ವಿವರವಾಗಿ ಚರ್ಚಿಸಿ, ವಿದ್ಯಾರ್ಥಿನಿಯರ ಪ್ರಶ್ನೆಗಳಿಗೆ ಸೂಕ್ತವಾದ ಉತ್ತರಗಳನ್ನು ನೀಡಿದರು.

ಸಂಚಾರಿ ಮಹಿಳಾ ಪೊಲೀಸ್ ಇನ್ಸ್‌ಸ್ಪೆಕ್ಟರ್ ಶ್ರೀಮತಿ ಗೀತಾ ಕುಲಕರ್ಣಿಯವರು ಮಹಿಳೆಯರು ಹುಟ್ಟಿನಿಂದ ಸಮಸ್ಯೆಯನ್ನು ಎದುರಿಸುವುದರಿಂದ ಅವರು ಅನ್ಯಾಯಗಳ ವಿರುದ್ಧ ನಿಂತು ಕಾನೂನಿನ ಚೌಕಟ್ಟಿನಲ್ಲಿ ಸಿಗುವ ರಕ್ಷಣೆಯನ್ನು ಪಡೆಯಬೇಕೆಂದರು. ಪೊಲೀಸ್ ಇಲಾಖೆಯಿಂದ ಮಹಿಳೆಯರಿಗೆ ಸಿಗುವ ಸೌಲಭ್ಯಗಳು, ಅವು ಹೇಗೆ ಎಲ್ಲಿ ಯಾರನ್ನು ಕೇಳಿ ಪಡೆಯಬೇಕೆಂದು ವಿವರವಾಗಿ ತಿಳಿಸಿಕೊಟ್ಟರು.

ಹ್ಯೂಮನ್ ರೈಟ್ಸ್ ಲಾಯರ್ಸ್ ನೆಟ್‌ವರ್ಕ್‌ನ ಭಾವನಾರವರು ಹಿಂಸೆಯಿಂದ ಮಹಿಳೆಯರ ಸಂರಕ್ಷಣೆಗಿರುವ ಕೌಟುಂಬಿಕ ದೌರ್ಜನ್ಯ ವಿರೋಧಿ ಕಾನೂನಿನ ಇತಿಹಾಸವನ್ನು ಸರಳವಾಗಿ ವಿವರಿಸಿದರು. 1978ರಲ್ಲಿ ಯು.ಕೆ. "(Unitel kingdom)ಯಲ್ಲಿ ಮೊಟ್ಟ ಮೊದಲನೆಯದಾಗಿ ಈ ಕಾನೂನು ಜಾರಿಗೆ ತರಲಾಯಿತು. 2005ರಲ್ಲಿ ಮೊದಲು ಭಾರತದಲ್ಲಿ ಜಾರಿಗೆ ತಂದಾಗ ಈ ಕಾನೂನಿನಲ್ಲಿ ಬಹಳಷ್ಟು ಮಿತಿಗಳು ಕಂಡುಬಂದಿದ್ದವು. ಆ ನಂತರ ಇವುಗಳನ್ನು ತಿದ್ದುಪಡಿ ಮಾಡಲಾಯಿತು. ಮಹಿಳಾ ಸಂಘಟನೆಗಳ ನಿರಂತರ ಹೋರಾಟದ ಫಲವಾಗಿ ಇದೆಲ್ಲ ಸಾಧ್ಯವಾಯಿತು" ಎಂದರು. ಭಾವನಾ ಅವರು



ಗೀತಾ ಕುಲಕರ್ಣಿ, ಅಂಜುಮಾಲ ಬಿ. ನಾಯಕ್

ಈ ಕಾನೂನನ್ನು ಸರಳವಾಗಿ ವಿವರಿಸುತ್ತಾ "ರಸ್ತೆಯಲ್ಲಿ ಯಾರಾದರೂ ಇನ್ನೊಬ್ಬರಿಗೆ ಹೊಡೆದರೂ ಪೊಲೀಸ್ ಠಾಣೆಗೆ ಹೋಗಿ ದೂರು ದಾಖಲಿಸಬಹುದು. ಆದರೆ ಅದೇ ಗಂಡ ಹೆಂಡತಿಯನ್ನು ಹೊಡೆದರೆ ಆಕೆ ಪೊಲೀಸ್ ಠಾಣೆಗೆ ಹೋಗಿ ದೂರು ನೀಡಿದರೂ ದೂರು ದಾಖಲಿಸಿಕೊಳ್ಳುತ್ತಿರಲಿಲ್ಲ. "ಗಂಡ-ಹೆಂಡತಿ ಜಗಳ, ಅಡ್ಜಸ್ಟ್ ಮಾಡಿಕೊಂಡು ಹೋಗಮ್ಮ" ಎಂದು ವಾಪಸ್ ಕಳಿಸಿ ಬಿಡುತ್ತಿದ್ದರು. ನಾಲ್ಕು ಗೋಡೆ ಒಳಗೆ ಮಹಿಳೆಯರ ಮೇಲೆ ನಡೆಯುವ ಹಿಂಸೆಯ ಜವಾಬ್ದಾರಿಯನ್ನು ರಾಜ್ಯ ವಹಿಸಿಕೊಳ್ಳಬೇಕು. ಈ ಕಾನೂನು ಬಂದ ಮೇಲೆ ಮಹಿಳೆಯರಿಗೆ ಅನುಕೂಲವಾಗಿದೆ. ದೂರು ದಾಖಲಾಗುತ್ತದೆ ಮತ್ತು ಬೀದಿಗೆ ಬೀಳದೆ ಆಕೆ ಅದೇ ಮನೆಯಲ್ಲೇ ವಾಸಿಸುವ ಹಕ್ಕನ್ನು ಭದ್ರ ಪಡಿಸುತ್ತದೆ" ಎಂದರು ಭಾವನಾ.

ಎರಡನೆಯ ಗೋಷ್ಠಿಯಲ್ಲಿ ಮಾತನಾಡಿದ ಜಯಮ್ಮನರು ಪೌರಕಾರ್ಮಿಕರ ಸಮಸ್ಯೆಯನ್ನು ಮನಕರಗುವಂತೆ ವಿವರಿಸಿದರು. ತಾವು ಕುಡಿಯುವ ನೀರು ಕೇಳಿದರೆ ಕೆಲವರು ಟಾಯ್ಲೆಟ್ ಮಗ್‌ಗಳಲ್ಲಿ ಕೊಡಲು ಬಂದ ಸನ್ನಿವೇಶಗಳನ್ನು ವಿವರಿಸುತ್ತಾ "ನಗರ ಸ್ವಚ್ಛ ವಾಗಿರಬೇಕು. ಅಧಿಕಾರಿಗಳು ಕಾರಿನಲ್ಲಿ ಹೊರಟರೆ ರಸ್ತೆಯಲ್ಲಿ ಒಂದು ಕಾಗದದ ತುಂಡು ಸಹ ಕಾಣಿಸಬಾರದು. ಮೋರಿಯು ಮುಖ ನೋಡಿಕೊಳ್ಳುವಷ್ಟು ಕ್ಲೀನ್‌ಆಗಿ ಇರಬೇಕು. ಆದರೆ ನಮ್ಮ ಬಗ್ಗೆ ಚಿಂತೆ ಮಾಡುವವರು ಯಾರು?" ಎಂದು ಪ್ರಶ್ನಿಸಿದರು. ತಮಗೆ ನೀಡುವ ಒಂದುಸಾವಿರ ರೂ. ವೇತನದಿಂದ ಇಂದಿನ ದುಬಾರಿ ಸ್ಥಿತಿಯಲ್ಲಿ ಜೀವನ ನಿರ್ವಹಿಸುವುದರ ಕಷ್ಟಗಳ ಬಗ್ಗೆ ಮಾತನಾಡುತ್ತ "ನಮಗೂ ಉತ್ತಮ ವೇತನ ನೀಡಿದರೆ, ನಾವು ಮಕ್ಕಳಿಗೆ ಉತ್ತಮ ವಿದ್ಯಾಭ್ಯಾಸ ನೀಡಲು ಸಾಧ್ಯವಾಗುತ್ತದೆ" ಯೆಂದರು. ತಮ್ಮ ಜನಾಂಗದವರಲ್ಲಿರುವ ಕುಡಿತದ ಚಟದ ಬಗ್ಗೆ ಇರುವ ಆರೋಪದ ಕುರಿತು ಮಾತನಾಡುತ್ತಾ "ರಸ್ತೆಯಲ್ಲಿ ಸತ್ತು ಬಿದ್ದಿರುವ ಹುಳಬಿದ್ದ ಪ್ರಾಣಿಗಳನ್ನು ಎತ್ತಿಹಾಕುವವರು ಕುಡಿಯದೇ ಅಂತಹ ಕೆಲಸವನ್ನು ಮಾಡಲು ಸಾಧ್ಯವಿಲ್ಲ" ಎಂದರು. ಅವರು ಆ ಸನ್ನಿವೇಶವನ್ನು ವರ್ಣಿಸುವಾಗ ಕೇಳುವವರ ಕಣ್ಣಲ್ಲಿ ನೀರು ತುಂಬಿತ್ತು. ಜಯಮ್ಮನವರು ಪೌರಕಾರ್ಮಿಕರ ಸಮಸ್ಯೆಗಳ ಹಲವು ಮುಖಗಳನ್ನು ತಮ್ಮದೇ ಅನುಭವಗಳ ಮೂಲಕ ಉದಹರಿಸುತ್ತ ವಿವರವಾಗಿ ಹಂಚಿಕೊಂಡರು.

ಗಾರ್ಮೆಂಟ್ಸ್ ಮಹಿಳಾ ಕಾರ್ಮಿಕರ ಸಮಸ್ಯೆಗಳನ್ನು ಕುರಿತು 'ಮುನ್ನಡೆ' ಸಂಸ್ಥೆಯ ಯಮುನಾ ಮಾತನಾಡುತ್ತಾ ಮನೆಯೊಳಗಿನ ನಾಲ್ಕು ಗೋಡೆಗಳ ನಡುವೆ ಮಹಿಳೆಯರು ಎಷ್ಟು ಹಿಂಸೆಯನ್ನು ಅನುಭವಿಸುತ್ತಿದ್ದರೋ ಅದಕ್ಕೂ ಹೆಚ್ಚು ಹಿಂಸೆಯನ್ನು ಗಾರ್ಮೆಂಟ್ಸ್ ಮಹಿಳೆಯರು ಅನುಭವಿಸುತ್ತಿದ್ದಾರೆ ಎಂದು ಹೇಳುತ್ತಾ "ನಮಗೆ ಐದು ನಿಮಿಷವಿರಲಿ ಒಂದು ಸೆಕೆಂಡ್ ಸಹ ಮುಖ್ಯವಾಗುತ್ತದೆ" ಎಂದು ಪ್ರಾರಂಭಿಸಿ, ಸುಮಾರು ಐದು ಲಕ್ಷ ಮಹಿಳೆಯರಿರುವ ಈ ಮಹಿಳಾ ಕಾರ್ಮಿಕರನ್ನು ಶೋಷಿಸುತ್ತಿರುವುದರ ಹಿಂದಿರುವ ಕ್ರೌರ್ಯವನ್ನು ವಿವರಿಸುತ್ತಾ ಬೆಳಿಗ್ಗೆಯಿಂದ ಸಂಜೆಯವರೆಗೆ ದುಡಿಯುವ ನಾವೂ ಕಾರ್ಮಿಕರು, ಆದರೆ ಮಹಿಳೆಯರೂ ಹೌದು ಎಂದರು. ಮಹಿಳೆಯರ ಇಂದಿನ ದುಸ್ಥಿತಿಗೆ ಮಹಿಳೆಯರು ಕಾರಣವಲ್ಲ, ಸಮಾಜ ಕಾರಣವೆಂದ ಅವರು ಮಾಲೀಕರು ದಿನೇ ದಿನೇ ಶ್ರೀಮಂತರಾಗುತ್ತಾರೆ, ಆದರೆ ನಮಗೆ 3 ಅಡಿ 5 ಅಡಿ ಜಾಗ ಸಿಗುವುದೂ ಕಷ್ಟವಾಗಿದೆಯೆಂದರು. ನಮ್ಮ ಮಾಲೀಕರಿಗೆ 'ಉತ್ಪಾದನೆ' ಮಾತ್ರ ಮುಖ್ಯ. ಹೆಚ್ಚು ಹೆಚ್ಚು ಉತ್ಪಾದನೆ ಆಗಲೆಂಬ ದುರಾಸೆಯಿಂದ ನಮ್ಮ ಮೇಲೆ ದೌರ್ಜನ್ಯ, ಲೈಂಗಿಕ ಕಿರುಕುಳ ನಡೆಸುತ್ತಾರೆ. ಆ ಹಿಂಸೆಯನ್ನು ಪದಗಳಲ್ಲಿ ವರ್ಣಿಸಲು ಸಾಧ್ಯವಿಲ್ಲವೆಂದರು. ವಿದೇಶೀಯರಿಗಾಗಿ ಬಟ್ಟೆ ಹೊಲಿಯುವ ನಾವು ನಮ್ಮ ಸಂಪೂರ್ಣ ಶಕ್ತಿಯನ್ನು ಕಳೆದುಕೊಳ್ಳುತ್ತಾ ಹೋಗುತ್ತಿದ್ದೇವೆ.

ತಕ್ಕ ಪ್ರತಿಫಲವಿಲ್ಲ: ಆರೋಗ್ಯವೂ ಇಲ್ಲ ಎನ್ನುತ್ತಾ, ನಮ್ಮನ್ನು ತುಂಬ ಅಸಹಾಯಕಸ್ಥಿತಿಗೆ ತಳ್ಳಲಾಗಿದೆ ಎಂದು ನೊಂದು ನುಡಿದರು.

ನಿರ್ಮಾಪಕಿಯಾದ ಶೈಲಜಾರವರು ಮಾಧ್ಯಮಗಳಲ್ಲಿ ಮಹಿಳೆಯರ ಮೇಲೆ ನಡೆಯುತ್ತಿರುವ ಹಿಂಸೆಯನ್ನು ಕುರಿತು ತಮ್ಮ ಅನುಭವವನ್ನು ಹಂಚಿಕೊಂಡರು. ನಟಿಯರ ವೈಯಕ್ತಿಕ ಜೀವನದ ವಿವರಗಳನ್ನು ಬಂಡವಾಳ ಮಾಡಿಕೊಂಡು ಅವರ ಬಗ್ಗೆ ಗಾಸಿಪ್‌ಗಳಿಗೆ ಒತ್ತು ನೀಡುವುದರ ಮೂಲಕ ಪತ್ರಿಕೆಗಳು ಹಾಗೂ ವಾಹಿನಿಗಳು ತಮ್ಮ ವಾಣಿಜ್ಯ ಉದ್ದೇಶಗಳನ್ನು ಈಡೇರಿಸಿಕೊಳ್ಳುತ್ತಿವೆಯೆಂದು ಹೇಳುತ್ತಾ, ನಟಿ ಅಮೂಲ್ಯಳಿಗೆ ಆದ ಮಾನಸಿಕ ಹಿಂಸೆಯನ್ನು ವಿವರಿಸಿದರು. ಅಹಂಕಾರದ, ಗಂಡುಬೀರಿ ಸ್ತ್ರೀಪಾತ್ರವನ್ನು ಪಳಗಿಸುವ, ಸಿನಿಮಾ ಹಾಡುಗಳು, ಚಿತ್ರಕಥೆಯ ಪರಂಪರೆಯನ್ನು ಕುರಿತು ಮಾತನಾಡಿದ ಶೈಲಜಾರವರು ಸೀರಿಯಲ್‌ಗಳು ಮಹಿಳೆಯರ ಸಿದ್ಧಪಾತ್ರಗಳನ್ನು ಚಿತ್ರಿಸುತ್ತಿವೆಯಲ್ಲದೆ, ಮಹಿಳೆಯರನ್ನು ವಿಲನ್‌ಗಳನ್ನಾಗಿ ಚಿತ್ರಿಸುತ್ತಿವೆ ಎಂದು ನುಡಿದರು. ಉದ್ರೇಕ, ಅಸಹಜತೆಯೇ ಪ್ರಧಾನವಾಗುತ್ತಿದೆ. ಇಲ್ಲಿಯ ಲಾಭಕೋರತನದ ಮುಂದೆ ಮಹಿಳೆ ತನ್ನ ಅನನ್ಯತೆಯನ್ನು ಉಳಿಸಿಕೊಳ್ಳಲು ಹೋರಾಡಬೇಕು. ಅದಕ್ಕೆ ಅಗತ್ಯವಾದ ಸಂಘಟನೆ, ತಾತ್ವಿಕ ಚೌಕಟ್ಟು ಈ ಕ್ಷೇತ್ರಗಳಿಗೆ ಇನ್ನೂ ಲಭ್ಯವಾಗಿಲ್ಲ ಎಂದರು.

ಮಾಜಿ ಸಚಿವೆ ಬಿ.ಟಿ. ಲಲಿತಾನಾಯಕ್‌ರವರು ರಾಜಕೀಯದಲ್ಲಿ ಮಹಿಳೆ ಹೇಗೆ ಹಿಂಸೆಗೆ ಒಳಗಾಗುತ್ತಾಳೆ ಎಂಬ ವಿಷಯವನ್ನು ಕುರಿತು ಮಾತನಾಡುತ್ತಾ ರಾಜಕೀಯ ಬದಲಾವಣೆಯನ್ನು ತರುವುದರಲ್ಲಿ ಮಹಿಳೆಯರು ಹೆಚ್ಚು ಪಾತ್ರವಹಿಸುವುದು ಅತ್ಯಗತ್ಯವಾಗಿದೆಯೆಂದರು. ನಮ್ಮ ಸಮಾಜದಲ್ಲಿ ತುಂಬಿ ತುಳುಕುತ್ತಿರುವ ಭ್ರಷ್ಟಾಚಾರ, ಮೂಢನಂಬಿಕೆ, ಜಾತೀಯತೆ ಮುಂತಾದ ಸಮಸ್ಯೆಗಳನ್ನು ತೊಡೆದು ಹಾಕುವ ಪ್ರಯತ್ನವನ್ನು ಮಾಡಬೇಕು. ಹೆಣ್ಣುಮಕ್ಕಳು ಆತ್ಮಗೌರವದಿಂದ ಬದುಕಬೇಕು. ಆದರ್ಶಗಳನ್ನು ನಮ್ಮದಾಗಿಸಿಕೊಳ್ಳಬೇಕು ಎಂದು ಹೇಳುತ್ತಾ, "ನಾವೇನು ಪುರುಷರಿಗಿಂತ ಕಡಿಮೆ ಎಂದು ಪುರುಷರನ್ನು ಮೆಚ್ಚಿಸುವುದಕ್ಕೆ ಪ್ರಯತ್ನಿಸಬೇಕು" ಎಂದು ಪ್ರಶ್ನಿಸಿದರು. ಇದಾವುದಕ್ಕೂ ಅಂಜದೆ, ಹಿಂದೆಗೆಯದೆ ರಾಜಕೀಯದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರು ತೊಡಗಿಸಿಕೊಂಡಾಗ, ಅಧಿಕಾರದ ಮೂಲಕ, ಅದರ ಸದ್ಬಳಕೆಯ ಮೂಲಕ ಮಾತ್ರ ಸಮಾಜವನ್ನು ಬದಲಾಯಿಸಲು ಸಾಧ್ಯವಾಗುತ್ತದೆ ಎಂದರು ಲಲಿತಾನಾಯಕ್,

ಕಾಮ್ರೇಡ್ ಲಕ್ಷ್ಮಿಯವರು ಸರ್ಕಾರದ ಧೋರಣೆ ಹಾಗೂ ನೀತಿಗಳಿಂದಾಗಿ ಬೆಲೆ ಏರಿಕೆ, ಭ್ರಷ್ಟಾಚಾರ ಮುಂತಾದ ಸಮಸ್ಯೆಗಳಿಂದಾಗಿ


ರಾಜೇಶ್ವರಿ    ಲಲಿತಾ ನಾಯಕ್

ಜನಸಾಮಾನ್ಯ ಮಹಿಳೆಯರ ದೈನಂದಿನ ಬವಣೆಗಳನ್ನು ಕುರಿತು ಮಾತನಾಡುತ್ತಾ ಇತ್ತೀಚೆಗೆ ಸರ್ಕಾರ ಪಡಿತರ ಚೀಟಿ ಹಾಗೂ ಗ್ಯಾಸ್ ಸಂಪರ್ಕದ ಅಕ್ರಮಗಳನ್ನು ಪತ್ತೆಹಚ್ಚಲು ನೀಡಿರುವ ಆದೇಶದಿಂದಾಗಿ ಜನಸಾಮಾನ್ಯರಿಗೇ ತೊಂದರೆ ಹೆಚ್ಚಾಗಿದೆ ಎನ್ನುತ್ತಾ ಮೂಲಭೂತ ಸೌಕರ್ಯಗಳನ್ನು ನೀಡದೆ ಜನರನ್ನು ವಂಚಿಸುವ ಸರ್ಕಾರದ ಹುನ್ನಾರದ ಅನೇಕ ಮುಖಗಳನ್ನು ಲಕ್ಷ್ಮಿಯವರು ವಿವರಿಸಿದರು. ಹೆಚ್ಚು ಹೆಚ್ಚು ಉತ್ಪಾದನೆ ಮಾಡಬೇಕೆಂಬ ಮಾಲೀಕರ ಬೇಡಿಕೆಯಿಂದಾಗಿ ಊಟ ಮಾಡಲೂ ಸಮಯದ ಅಭಾವವಾಗಿದೆ. ಮಹಿಳೆ ಯರಿಗೆ ದುಡಿಯುವ ಸ್ಥಳದಲ್ಲಿ ಟಾಯ್ಲೆಟ್ ಬಳಸಲು ಸೂಕ್ಷ್ಮ ವ್ಯವಸ್ಥೆ ಇಲ್ಲ. ಮೂಲಭೂತ ಸೌಲಭ್ಯಗಳ ಕೊರತೆಯಿಂದಾಗಿ ಕಾರ್ಮಿಕರಲ್ಲಿ ಉಂಟಾಗಿರುವ ಒತ್ತಡ, ಹಿಂಸೆ, ಆರೋಗ್ಯದ ಸಮಸ್ಯೆಗಳನ್ನು ಕುರಿತು ವಿವರವಾಗಿ ಮತನಾಡಿದರು. ಸಂಘಟಿತ ಹೋರಾಟವೊಂದೇ ನಮ್ಮ ಮುಂದಿರುವ ದಾರಿ ಎಂದರು. ಸಂಘಟಿಸುವ ವಿಧಾನಗಳನ್ನು ವಿವರಿಸಿದರು.

ಸರ್ಕಾರಿ ಪದವಿ ಪೂರ್ವ ಕಾಲೇಜು ಹಾಗೂ ಯಲಹಂಕ ಕಾಲೇಜು ವಿದ್ಯಾರ್ಥಿನಿಯರು ಉತ್ಸಾಹದಿಂದ ಈ ಸಂವಾದ ಕಾರ್ಯಕ್ರಮದಲ್ಲಿ ಭಾಗವಹಿಸಿ ಸಂದೇಹಗಳನ್ನು ಪರಿಹರಿಸಿಕೊಂಡದ್ದು ಒಂದು ಆಶಾದಾಯಕ ಸಂಗತಿಯಾಗಿತ್ತು. ವಿದ್ಯಾರ್ಥಿನಿಯರು ಪ್ರಶ್ನೆಗಳನ್ನು ಕೇಳುವುದರ ಜೊತೆಗೆ ತಮ್ಮ ಅನಿಸಿಕೆಗಳನ್ನು ಹಂಚಿಕೊಂಡರು. ಎನ್.ಎಮ್.ಕೆ.ಆರ್.ವಿ. ಕಾಲೇಜಿನ ವಿದ್ಯಾರ್ಥಿನಿ ಸೃಷ್ಟಿಯವರ ಸುಶ್ರಾವ್ಯವಾದ ಹಾಡುಗಳು ಮೆಚ್ಚುಗೆ ಗಳಿಸಿದುವು.

■ *ಎಚ್.ಎಸ್. ರಾಜೇಶ್ವರಿ*






# ಕಗ್ಗತ್ತಲೆಯ ನಾಡು ಮಣಿಪುರದಲ್ಲಿ ಪ್ರಜಾಪ್ರಭುತ್ವದ ಕಗ್ಗೊಲೆ

'ಇರೋಮ್ ಶರ್ಮಿಳಾ' ಇಂದು ತಮ್ಮ 10 ವರ್ಷದ ಉಪವಾಸ ದಿಂದಾಗಿ ಪ್ರಪಂಚದಾದ್ಯಂತ ಸುದ್ದಿಯಾಗಿರುವ ಮಹಿಳೆ. ಇಂಫಾಲದಲ್ಲಿ ಪ್ರಭುತ್ವದ ಪ್ರತಿನಿಧಿಗಳು ಒತ್ತಾಯಪೂರ್ವಕವಾಗಿ ಮೂಗಿನಿಂದ ಆಕೆಗೆ ಬದುಕುಳಿಯಲು ದ್ರವ ಪದಾರ್ಥ ನೀಡುತ್ತಿದ್ದಾರೆ. 21ನೆಯ ಆಧುನೀಕರಣದಲ್ಲಿ, ಜಾಗತೀಕರಣದಲ್ಲಿ, ಇಡೀ ವಿಶ್ವವೇ ಒಂದು ಹಳ್ಳಿಯಾಗುತ್ತದೆ ಎನ್ನುವಂತಹ ವಾತಾವರಣದಲ್ಲಿ ಬದುಕುತ್ತಿರುವ ನಾವು–ಇರೋಮ್ ಶರ್ಮಿಳಾ ಹನ್ನೊಂದನೆಯ ವರ್ಷದ ಉಪವಾಸ ವನ್ನು ಮುಂದುವರಿಸುವುದನ್ನು ತಣ್ಣನೆ ಕಣ್ಣುಗಳಲ್ಲಿ ನೋಡುತ್ತಾ ಕೂರಬೇಕೆ? ಎಂಬುದು ಈಗ ಪ್ರಶ್ನೆಯಾಗುತ್ತಿದೆ. ಉಪವಾಸ ಮಾಡುತ್ತಾ ಮಾಡುತ್ತಾ ಸಾವಿನೆಡೆಗೆ ತನ್ನನ್ನು ನೂಕಿಕೊಳ್ಳುತ್ತಿರುವ ಇರೋಮ್ ಶರ್ಮಿಳಾ ನಮ್ಮೆಲ್ಲರ ಹೃದಯವನ್ನು ಕಲಕಿದ ಹಾಗೆ ಪ್ರಭುತ್ವದ ಹೃದಯವನ್ನು ಕಲಕಬಲ್ಲಳೇ? ಅಥವಾ ತನ್ನ ಶಾಂತಿ ಮಂತ್ರದಿಂದ ತನ್ನನ್ನೇ ನೋಯಿಸಿಕೊಳ್ಳುವ ಈಕೆಯ ಪ್ರಯತ್ನ ಪ್ರಭುತ್ವದ ಹೃದಯವನ್ನು ಗೆಲ್ಲಬಲ್ಲದೇ? ಬಂದೂಕಿನ ನಳಿಕೆಯಿಂದ ಸಾವಿರಾರು ನಾಗರಿಕರನ್ನು ಹೇಳ ಹೆಸರಿಲ್ಲದಂತೆ ಮಾಡುತ್ತಿರುವ ಪ್ರಭುತ್ವಕ್ಕೆ ಈಕೆಯ ಉಪವಾಸವನ್ನು ಸವಾಲೆಂದು ಸ್ವೀಕರಿಸುವ ಅಗತ್ಯ ಕಾಣಿಸುತ್ತಿದೆಯೋ ಇಲ್ಲವೋ ಎನ್ನುವುದೂ ಕೂಡಾ ಈಗ ಚರ್ಚಿಸಬೇಕಾದ ವಿಚಾರವಾಗಿದೆ.

ಕಳೆದ ಹತ್ತು ವರುಷದಿಂದ ಇರೋಮ್ ಶರ್ಮಿಳಾರ ಬೇಡಿಕೆ ಒಂದೇ, 1958ರಲ್ಲಿ ಅಸ್ತಿತ್ವಕ್ಕೆ ಬಂದ 'ಸೈನಿಕರ ವಿಶೇಷಾಧಿಕಾರದ ಕಾಯಿದೆ'ಯನ್ನು ತೆಗೆದುಹಾಕುವುದು. ಈ ಕಾನೂನಿನ ಕೆಳಗೆ ನಡೆಯುವ ದೌರ್ಜನ್ಯವು ಕೊಲೆ, ಸುಲಿಗೆ, ಅತ್ಯಾಚಾರ, ಹಿಂಸೆ, ಕಂಡಲ್ಲಿ ಗುಂಡಿಕ್ಕಿ ಕೊಲ್ಲುವ ಹಲವಾರು ರೀತಿಯ ಅಮಾನವೀಯ ಕೃತ್ಯಗಳನ್ನು ಒಳಗೊಂಡಿದೆ. ಇಲ್ಲಿ ಯಾರು ಯಾರನ್ನು ನ್ಯಾಯ ಕೇಳಬೇಕು? ಎಂಬುದೇ ಪ್ರಶ್ನೆಯಾಗಿದೆ. ಈ ವಿಶೇಷಾಧಿಕಾರವನ್ನು ಪ್ರಶ್ನಿಸುವ ಹಾಗಿಲ್ಲ. ಪೊಲೀಸರಿಗೆ ಫಿರ್ಯಾದು ಕೊಡುವ ಹಾಗಿಲ್ಲ, ನ್ಯಾಯಾಲಯದ ಕಟ್ಟೆ ಹತ್ತುವ ಹಾಗಿಲ್ಲ. ಹಾಗಿದ್ದರೆ ಭಾರತದ ಪ್ರಜಾಪ್ರಭುತ್ವದ ಕನಸು ಮಣಿಪುರದ ಜನರಿಗೆ ಅನ್ವಯಿಸುವುದೇ ಇಲ್ಲವೇ?

ಯು.ಎನ್. ಕಮಿಟಿ, ಹೆಂಗಸರ ದೌರ್ಜನ್ಯ ವಿರೋಧಿ ಕಮಿಟಿ ಯುರೋಪಿಯನ್ ಪಾರ್ಲಿಮೆಂಟ್, ಅನೇಕ ಮಾನವ ಹಕ್ಕು ಸಮಿತಿಗಳು ಪ್ರಧಾನ ಮಂತ್ರಿಯವರ ವರ್ಕಿಂಗ್ ಗ್ರೂಪ್, ಜೀವನ್ ರೆಡ್ಡಿ ಕಮಿಟಿ ಹೀಗೆ–ಸರ್ಕಾರ ನೇಮಿಸಿದ ಸಮಿತಿಗಳು ಹಾಗೂ ಪ್ರಪಂಚದಾದ್ಯಂತ ವಿವಿಧ ಸಮಿತಿಗಳು – "ಈ ಸೈನಿಕರ ವಿಶೇಷಾಧಿಕಾರದ ಕಾನೂನು ಜನರ ಮೇಲೆ ದೌರ್ಜನ್ಯ ನಡೆಸಲು ಬಳಕೆಯಾಗುತ್ತಿವೆ. ಹಾಗಾಗಿ ವಾಪಸ್ಸು ತೆಗೆದುಕೊಳ್ಳಿ" ಎಂದು ಭಾರತಸರ್ಕಾರಕ್ಕೆ ಒತ್ತಾಯ ಪಡಿಸಿದಾಗ್ಯೂ ಕೂಡಾ ಪ್ರಭುತ್ವ ಈವರೆಗೆ ಇದಕ್ಕೆ ಮಣಿಯದೇ ಮೌನವಾಗಿದೆ. ಹಾಗಾಗಿ ಇರೋಮ್ ಶರ್ಮಿಳಾ ನಿರಂತರವಾಗಿ ತಮ್ಮ ಉಪವಾಸವನ್ನು ಮುಂದುವರಿಸುತ್ತಲೇ ಇದ್ದಾರೆ. ಪ್ರತಿಭಟನೆಯ ಧ್ವನಿ ಎತ್ತಿದರೆ, ಹೋರಾಟ ಮಾಡಿದರೆ ಏನಾಗುತ್ತದೆ ನೋಡಿ ಎಂದು ತಿಳಿಸಿಕೊಡಲೆಂಬಂತೆ ಮನೋರಮಾದೇವಿಯಂತಹ ಕಾರ್ಯಕರ್ತೆ ಯನ್ನು ಸೈನಿಕರು ಅತ್ಯಾಚಾರವೆಸಗಿ ಕೊಂದು ಬೀದಿಗೆ ಎಸೆದಿದ್ದಾರೆ. ಹೀಗೆ ಬೀದಿ ಹೆಣವಾಗುತ್ತಿರುವ ಅಮಾಯಕರು ಸಾವಿರಾರು ಜನ. ಸಾವು ಮಣಿಪುರದ ಬೀದಿ ಬೀದಿಗಳಲ್ಲಿ ತನ್ನ ಕಬಂಧ ಬಾಹುಗಳನ್ನು ಚಾಚಿದುದರ ವಿರುದ್ಧ ಮಹಿಳೆಯರು ಹಲವಾರು ರೀತಿ ಪ್ರತಿಭಟನೆ ನಡೆಸಿದ್ದಾರೆ. ಟಾರ್ಚ್ ಹಿಡಿದು ಸಾಗಿದ್ದಾರೆ, ಮೆರವಣಿಗೆ ಮಾಡಿದ್ದಾರೆ, ಪ್ರತಿಭಟನೆಯಲ್ಲಿ ದಿನಗಟ್ಟಲೆ ಧರಣಿ ಕೂತಿದ್ದಾರೆ. ಸಾಲದೆಂಬಂತೆ ಹಲವಾರು ಜನ ತಾಯಂದಿರು ಬೆತ್ತಲೆಯಾಗಿ ಸೈನಿಕರ ಆಫೀಸರ್ಸ್ ಕ್ವಾರ್ಟಸ್ ಮುಂದೆ ನಿಂತು 'ನಮ್ಮ ಮೇಲೆ ಅತ್ಯಾಚಾರ ಮಾಡಿ' ಎಂದು ಮನೋರಮಾದೇವಿಯ ಮೇಲಿನ ಹಿಂಸೆಯನ್ನು ಪ್ರತಿಭಟಿಸಿ ದ್ದಾರೆ. ಇದಕ್ಕಿಂತ ಹೆಚ್ಚಿನ ನಾಚಿಕೆಗೇಡಿನ ಸಂಗತಿ ಪ್ರಜಾಪ್ರಭುತ್ವದಲ್ಲಿ ಇದೆಯೇ?

ದೇಶದೆಲ್ಲೆಡೆ ಇರೋಮ್ ಶರ್ಮಿಳಾರನ್ನು ಬೆಂಬಲಿಸಿ ಹಲವಾರು ಕಾರ್ಯಕ್ರಮಗಳು ನಡೆಯುತ್ತಲೇ ಇರುತ್ತವೆ. 'ಪೀಪಲ್ಸ್ ಸಾಲಿಡಾರಿಟಿ ಕನ್ಸರ್ನ್' ಹೆಸರಿನಲ್ಲಿ ಹಲವು ಪ್ರಗತಿಪರ ಸಂಘಟನೆಗಳು ಬೆಂಗಳೂರಿನಲ್ಲಿ ಇತ್ತೀಚೆಗೆ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದವು. ಓಜೋಸ್ ಸುನಿತ ವಿಜಯ್ ಅವರು ಮಣಿಪುರದ ಇರೋಮ್ ಶರ್ಮಿಳಾರ ಹೋರಾಟ ಕುರಿತ ಒಂದು ಏಕವ್ಯಕ್ತಿ ನಾಟಕವನ್ನು ಬೆಂಗಳೂರಿನ ಹಲವಾರು ಕಡೆ ಪ್ರದರ್ಶಿಸಿದರು. ಓಜೋಸ್ ಮೂಲತಃ ಪುಣೆಯವರು. 25 ವರುಷದ ಈಕೆಯ ತಂದೆ–ತಾಯಿ NAPMನಲ್ಲಿ ಕಾರ್ಯಕರ್ತ ರಾಗಿರುವವರು. ಬಯೋಡೈವರ್‌ಸಿಟಿನಲ್ಲಿ ಎಂ.ಎಸ್‌ಸಿ. ಮಾಡಿರುವ ಓಜೋಸ್ ಕೂಡಾ NAPMನಲ್ಲಿ ಕಾರ್ಯಕರ್ತರಾಗಿ ದುಡಿದು ಅನುಭವ ಇರುವವರು. ನರ್ಮದಾ ನದಿಯ ಅಣೆಕಟ್ಟಿನ ಹೋರಾಟ ಕುರಿತಂತೆ ದೆಹಲಿಯ ಫೋರಂ ಒಂದು ಪ್ರಕಟಿಸಿದ 'ಫ್ಲೋರಲ್

ನೆಸೆಸಿಟೀಸ್' ಪುಸ್ತಕಕ್ಕಾಗಿ ಓಜೋಸ್ ಕೆಲಸ ಮಾಡಿದ್ದಾರೆ. ಈಕೆ ಪ್ರದರ್ಶಿಸಿದ ಏಕವ್ಯಕ್ತಿ ಪ್ರದರ್ಶನದ ಹೆಸರು 'ಲೇ ಮಷಾಲೇನ್' ಇದರ ಅರ್ಥ ಟಾರ್ಚ್ ಹಿಡಿದಿರುವವಳು ಎಂದು.

ಓಜೋಸ್ ತಮ್ಮ ಏಕವ್ಯಕ್ತಿ ಪ್ರದರ್ಶನದಲ್ಲಿ ಇರೋಮ್ ಶರ್ಮಿಳಾರ ಹೋರಾಟದ ಮೇಲೆ ಬೆಳಕು ಚೆಲ್ಲುವುದರ ಜೊತೆಗೆ ಮಣಿಪುರದ ಇಂದಿನ ಸ್ಥಿತಿಯನ್ನೂ ಬಿಂಬಿಸುತ್ತಾರೆ. ಮಣಿಪುರ ಸ್ವತಂತ್ರವಾದದ್ದು ಭಾರತದ ಸ್ವಾತಂತ್ರ್ಯಕ್ಕಿಂತ ಮುಂಚೆ. ಆದರೆ ಸ್ವತಂತ್ರ ಭಾರತ ಅವರಿಗೇನೂ ಸೌಲಭ್ಯ ನೀಡಿಲ್ಲ. ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಮಣಿಪುರದ ನಾಯಕರ ಪಾತ್ರ ಚರಿತ್ರೆಯಲ್ಲಿ ಎಲ್ಲೂ ದಾಖಲಾಗಿಲ್ಲ. ನಮ್ಮ ರಾಷ್ಟ್ರಗೀತೆಯಲ್ಲಿ ಮಣಿಪುರದ ಪ್ರಸ್ತಾಪವೇ ಇಲ್ಲ. ದಿನದ 3–4 ಗಂಟೆಗಳಷ್ಟೇ ಮಣಿಪುರದಲ್ಲಿ ವಿದ್ಯುಚ್ಛಕ್ತಿ ಇರುತ್ತದೆ. ಉಳಿದಂತೆ ಕತ್ತಲೆಯೇ. ಮಣಿಪುರದ ರಾಜಧಾನಿ ಇಂಫಾಲಾದಲ್ಲಿ ರೈಲ್ವೇ ಸ್ಟೇಷನ್ನೂ ಇಲ್ಲ. ಇವರಿಗೆ ಇರುವ ರೈಲ್ವೇ ಸ್ಟೇಷನ್ನಿನ ದೂರ 290 ಕಿ.ಮೀ. ಓಜೋಸ್ ಪ್ರದರ್ಶಿಸುವ ನಾಟಕ ಇದೆಲ್ಲ ಒಳಗೊಂಡಂತೆ ರಾಷ್ಟ್ರೀಯತೆಯ ವೈಭವೀಕರಣವನ್ನು ಪ್ರಶ್ನೆ ಮಾಡುತ್ತದೆ; ಮಣಿಪುರದಲ್ಲಿ ನಡೆಯುತ್ತಿರುವ ದೌರ್ಜನ್ಯಗಳ ಮೇಲೆ ಬೆಳಕು ಚೆಲ್ಲುತ್ತದೆ.

ನಾಟಕದಲ್ಲಿ ಬಳಸುವ ಪರಿಕರಗಳು ಸರಳವಾದವುಗಳು. ಹೊದ್ದುಕೊಳ್ಳುವ ವೇಲ್‌ಅನ್ನು ಹಲವಾರು ಸಂಕೇತಗಳನ್ನಾಗಿ ಬಳಸುತ್ತಾರೆ. ಮನೋರಮಾದೇವಿಯ ಅತ್ಯಾಚಾರ, ಕೊಲೆ ಪ್ರಕರಣವನ್ನು ಕುರಿತು ಹೇಳುವಾಗ ಅಭಿನಯದಲ್ಲಿ ಅವರು ಧರಿಸಿದ ವೇಲನ್ನು ಸಮರ್ಥವಾಗಿ ಬಳಸುತ್ತಾರೆ. ಹೆಣ್ಣೆಂದರೆ ಎರಡು ಮೊಲೆ, ಒಂದು ಯೋನಿಯಷ್ಟೇ ಎಂದು ಭಾವಿಸಿರುವ ಮಣಿಪುರದ ಸೈನಿಕರ ವರ್ತನೆಯನ್ನು ಖಂಡಿಸುತ್ತಾರೆ.

ಈ ನಾಟಕಕ್ಕೆ ಮಲೆಯಾಳಂನ ಕಾರ್ಯಕರ್ತರಾದ ಸಿವಿಕ್ ಚಂದ್ರನ್ ಬರೆದ ಮೇರಾ ಫೈಬಿ ನಾಟಕ ಆಧಾರ ಎನ್ನುವ ಓಜೋಸ್, 'ಲೇ ಮಶಾಲೈನ್ ಜಲ್ ಪಡೆ ಹಾಯ್' ಎಂಬ ಹಾಡಿನಿಂದ ಸ್ಫೂರ್ತಿಗೊಂಡು ತಮ್ಮ ನಾಟಕವನ್ನು 'ಲೇ ಮಷಾಲೇನ್' ಎಂದು ಹೆಸರಿಟ್ಟುದಾಗಿ ಹೇಳುತ್ತಾರೆ. ಓಜೋಸ್ ತನ್ನ ಬದುಕಿಗಾಗಿ, ಹಣಕ್ಕಾಗಿ ಏನು ಮಾಡುತ್ತಾರೆ, ಹೇಗೆ ಹೊಂದಿಸಿಕೊಳ್ಳುತ್ತಾರೆ ಎಂದು 'ನಮ್ಮ ಮಾನಸ' ಕೇಳಿದ ಪ್ರಶ್ನೆಗೆ ಆಕೆ ನೀಡಿದ ಉತ್ತರ ಸ್ಪಷ್ಟವಾಗಿತ್ತು. "ಇದು ಜನರ ನಾಟಕ. ಅವರು ಇದನ್ನು ಬೆಂಬಲಿಸುವವರೆಗೆ ಈ ಪ್ರದರ್ಶನಗಳು ನಡೆಯುತ್ತಲೇ ಇರುತ್ತವೆ. ಅವರೇ ನನ್ನ ಖರ್ಚು ವೆಚ್ಚಗಳನ್ನು ಸರಳವಾದ ರೀತಿಯಲ್ಲಿ ತೂಗಿಸಿಕೊಂಡು ಹೋಗುತ್ತಾರೆ." ಓಜೋಸ್ ಈ ನಾಟಕವನ್ನು ಇಂಫಾಲ, ಮುಂಬೈ, ಕೊಜಿಕೋಡ, ಬೆಂಗಳೂರು ಹೀಗೆ ಪ್ರದರ್ಶಿಸುತ್ತಲೇ ಇದ್ದಾರೆ. "ನಾಟಕದ ಪ್ರದರ್ಶನ ಇಲ್ಲಿಗೆ ಮುಗಿಯಬಹುದು, ಆದರೆ ಇರೋಮ್ ಶರ್ಮಿಳಾರ ಹೋರಾಟ ನಡೆಯುತ್ತಲೇ ಇದೆ. ನೀವೂ ಕೈ ಜೋಡಿಸಿ" ಎಂಬ ಸಂದೇಶವನ್ನು ಸಾರುತ್ತಾ 25 ವರ್ಷದ ಓಜೋಸ್ ಭಾರತದ ಉದ್ದಗಲಕ್ಕೂ ಪ್ರದರ್ಶನ ಹಮ್ಮಿಕೊಳ್ಳುತ್ತಿದ್ದಾರೆ.

ಇರೋಮ್ ಶರ್ಮಿಳಾಳ ಬೆಂಬಲಕ್ಕಾಗಿ ಪೀಪಲ್ ಸಾಲಿಡ್ಯಾರಿಟಿ ಕನ್ಸರ್ನ್‌ರವರು ಸಂಘಟಿಸಿದ ಕಾರ್ಯಕ್ರಮದಲ್ಲಿಯೇ ಮಣಿಪುರದಲ್ಲಿ ಹೆಚ್ಚಾಗುತ್ತಿರುವ ವಿಧವೆಯರ ಮೇಲೆ ಬೆಳಕು ಚೆಲ್ಲುವ ಚಿತ್ರವೊಂದನ್ನು ಪ್ರದರ್ಶಿಸಲಾಯಿತು. ಸೈನಿಕರಿಗೆ ನೀಡಿರುವ ವಿಶೇಷಾಧಿಕಾರದ ಕಾಯಿದೆಯಿಂದಾಗಿ ಮಣಿಪುರದಲ್ಲಿ 20 ರಿಂದ 30 ವರ್ಷದ ಒಳಗಿನ ಅನೇಕ ಮಹಿಳೆಯರು ವಿಧವೆಯರಾಗುತ್ತಿದ್ದಾರೆ. ಈ ಅಸಹಾಯಕ ಮಹಿಳೆಯರು ಹಲವಾರು ಸಂಘಟನೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ನ್ಯಾಯಕ್ಕಾಗಿ ಸಂಘಟಿತರಾಗಿ ಹೋರಾಟ ನಡೆಸುತ್ತಿದ್ದಾರೆ. ಈ ಕಾಯಿದೆಯ ದೌರ್ಜನ್ಯಕ್ಕೆ ಒಳಗಾಗಿ ವಿಧವೆಯಾಗಿರುವ ಇಲಾಂಗ್‌ಬಾಮ್ ನಿತಿನ್‌ದೇವಿಯು ಇರೋಮ್ ಶರ್ಮಿಳಾರ ಬೆಂಬಲವಾಗಿ ನಡೆದ ಬೆಂಗಳೂರಿನ ಸೆಮಿನಾರ್‌ನಲ್ಲಿ ಭಾಗವಹಿಸಿದ್ದರು. ಮೂವತ್ತು ವರ್ಷದಲ್ಲಿ ಆಕೆ ರೈಲು ಪ್ರಯಾಣ ಮಾಡಿದ್ದು ಇದೇ ಮೊದಲ ಬಾರಿಗೆ! ಜೂನ್ 28, 2008ರಲ್ಲಿ ಈಕೆಯ ಗಂಡ ಸೈನಿಕರ ಗುಂಡಿಗೆ ಬಲಿಯಾದ. ಈತ ಕೆಲಸ ಮಾಡುತ್ತಿದ್ದುದು ನಿವೃತ್ತ IGPಯ ಖಾಸಗಿ ವಾಹನ ಚಾಲಕನಾಗಿ. ಆತನ ಸಾವಿನ ಸುದ್ದಿಯನ್ನು ನಿತಿನ್ ಓದಿದ್ದು ದಿನ ಪತ್ರಿಕೆಯಲ್ಲಿ. ಭಯೋತ್ಪಾದಕ ಎಂದು ಹಣೆಪಟ್ಟಿ ಹಚ್ಚಿ ಅತನನ್ನು ಕೊಲೆ ಮಾಡಲಾಗಿತ್ತು. ಆಕೆಯ ಗಂಡ ಮಾರ್ಕೆಟ್‌ನಲ್ಲಿದ್ದ ತನ್ನ ತಾಯಿಯನ್ನು ನೋಡಲು ಹೋಗಿದ್ದ. ತಾಯಿಯನ್ನು ನೋಡಲು ಹೋದ ಗಂಡ ವಾಪಸ್ಸು ಬರದೇ ಹೋದಾಗ ನಿತಿನ್ ಕಂಗಾಲಾದರು. ಒಂದು ವರುಷದ ಮಗನನ್ನು ಮನೆಯಲ್ಲಿ ಬಿಟ್ಟು ಗಂಡನಿಗಾಗಿ ಹುಡುಕಾಡಿದ್ದರು. ಈ ತರಹದ ಸಾವಿರಾರು ಪ್ರಕರಣಗಳು ಮಣಿಪುರದಲ್ಲಿ ನಡೆಯುತ್ತವೆ. ನಿತಿನ್ ಯಾರಿಗೆ ಫಿರ್ಯಾದು ಕೊಡಬೇಕು? ಯಾರ ಬಳಿ ನ್ಯಾಯ ಕೇಳಬೇಕು? ಮಣಿಪುರದಲ್ಲಿ ಸೈನಿಕರ ಬಂದೂಕಿನ ನಳಿಕೆಯಲ್ಲಿ ಗಂಡ–ಮಕ್ಕಳನ್ನು ಕಳೆದುಕೊಂಡ ಮಹಿಳೆಯರೆಲ್ಲರ ಗೋಳೂ ಇದೇ. ಯಾರಿಂದ ಪರಿಹಾರ ಸಿಗುತ್ತದೆ? ಯಾರಿಂದ ನ್ಯಾಯ ಸಿಗುತ್ತದೆ? ಯಾರು ಫಿರ್ಯಾದನ್ನು ದಾಖಲಿಸಿಕೊಳ್ಳುತ್ತಾರೆ? ನಿತಿನ್ ಪೊಲೀಸ್ ಸ್ಟೇಷನ್‌ಗೆ ಹೋದಾಗ ಆಸ್ಪತ್ರೆಯ ಶವಾಗಾರದಲ್ಲಿ ಆತನ ಹೆಣ ಹುಡುಕಲು ಪೊಲೀಸರು ಹೇಳಿದ್ದರು. ಆಕೆಯ ಗಂಡನ ಶವ ಪತ್ತೆಯಾದುದು ಶವಾಗಾರದಲ್ಲಿಯೇ. ಭಯೋತ್ಪಾದಕ ಎಂಬ


ಚಳವಳಿಯ ನಾಯಕ ಬಬ್ಲು ಮತ್ತು ನಿತಿನ್‌ದೇವಿ


'ಪೀಪಲ್ಸ್ ಸಾಲಿಡ್ಯಾರಿಟಿ ಕನ್ಸರ್ನ್' ಸಂಘಟನೆಯು ಇರೋಮ್ ಶರ್ಮಿಳಾರನ್ನು ಬೆಂಬಲಿಸಿ ಬೆಂಗಳೂರಿನಲ್ಲಿ ನಡೆಸಿದ ಪ್ರತಿಭಟನೆಯಲ್ಲಿ

ಹಣೆಪಟ್ಟಿ ಕಟ್ಟಿಕೊಂಡು ಆತ ಶವಾಗಾರದಲ್ಲಿ ಬಿದ್ದಿದ್ದ. ಅದು ಹೇಗೆ ಸಾಧ್ಯ ಎಂಬುದೇ ನಿತಿನ್‌ದೇವಿಗೆ ಅರ್ಥವಾಗದಿರುವ ಪ್ರಶ್ನೆ. ಆತ ಭಯೋತ್ಪಾದಕನಾಗಿದ್ದರೆ ಆ ಸತ್ಯ ಆಕೆಗೆ ತಿಳಿದಿರಬೇಕಿತ್ತು. ಅವನು ಭಯೋತ್ಪಾದಕನಾಗಿರಲಿಲ್ಲ ಎಂಬ ಸತ್ಯವನ್ನು ಯಾರಿಗೆ ಹೇಳುವುದು? ಸೈನಿಕರಿಗೆ ನೀಡಿರುವ ವಿಶೇಷಾಧಿಕಾರದ ಕೆಳಗೆ ಅವರು ಏನನ್ನು ಬೇಕಾದರೂ ಮಾಡಬಹುದು, ಯಾರನ್ನು ಬೇಕಾದರೂ ಕೊಲ್ಲಬಹುದು. ಇದಕ್ಕೆ ಯಾರೂ ಶಿಕ್ಷಾರ್ಹರಲ್ಲ.

ನಿತಿನ್ ದೇವಿಗೆ ನ್ಯಾಯ ಸಿಗುವುದು ಹೇಗೆ? ಒಂದು ವರ್ಷದ ಮಗ ಅಪ್ಪ ಎಲ್ಲಿ ಎಂದು ಕೇಳಿದರೆ ಸೈನಿಕರ ಬಂದೂಕಿನ ನಳಿಕೆಯಲ್ಲಿದ್ದಾನೆ ಎಂಬ ಕಠೋರ ವಾಸ್ತವ ಆಕೆ ಹೇಗೆ ಹೇಳಿ ಯಾರು? ಆಕಾಶದಲ್ಲಿ ಚಂದ್ರನ ಹಿಂದೆ ಇದ್ದಾನೆ ಎಂಬ ರೋಮಾಂಚಕ ಸುಳ್ಳೊಂದನ್ನು ಹೇಳಿ ಎಷ್ಟು ದಿನ ಆಕೆ ಆತನನ್ನು ಸಂತೈಸಬಹುದು? ನಾನೇ ಅವನ ಅಪ್ಪ-ಅಮ್ಮ ಎಂದು ದಿನಕಳೆದಂತೆ ಹೇಳುತ್ತೇನೆ ಎನ್ನುತ್ತಾರೆ ಆಕೆ. ಈಗ ಈಕೆ 'Extra Judicial execution victimed families Associationನಲ್ಲಿ ಕೆಲಸ ಮಾಡುತ್ತಾರೆ. ಈ ಸಂಘಟನೆಯಲ್ಲಿ 100 ಜನ ಸದಸ್ಯರಿದ್ದಾರೆ. ಬಹುತೇಕ ಮಂದಿ ಕುಟುಂಬದ ಯಾರಾದರೂ ಒಬ್ಬರು ಸದಸ್ಯರನ್ನು ಸೈನಿಕರ ಮಾರಣ ಹೋಮದಲ್ಲಿ ಕಳೆದುಕೊಂಡವರೇ. ಈ ಸಂಘಟನೆಯನ್ನು ನೋಂದಾವಣೆ ಮಾಡುವುದಾಗಿ ಸರ್ಕಾರ ಹೇಳುತ್ತದೆ. ಆದರೆ ಎಲ್ಲೂ ನ್ಯಾಯ ಸಿಗದ ಹಂತದಲ್ಲಿ ಪರ್ಯಾಯವಾಗಿ ನ್ಯಾಯ ಹುಡುಕುತ್ತಿರುವ ಸಂಘಟನೆಯವರು ಆ ಪದವನ್ನು ತೆಗೆಯಲು ತಯಾರಾಗಿಲ್ಲ. ಸೈನಿಕರ ಮಾರಣ ಹೋಮಕ್ಕೆ ಒಳಗಾದ ಈ ಗಂಡಂದಿರ ಹೆಂಡತಿಯರು ನ್ಯಾಯ ಸಿಗದೇ ಅಲೆಯುತ್ತಿದ್ದಾರೆ. ಭಯೋತ್ಪಾದಕನೆಂಬ ಹಣೆಪಟ್ಟಿ ಕಟ್ಟಿ ಬಿಡುವುದರಿಂದ ಪರಿಹಾರ ಕೂಡಾ ಇವರಿಗೆ ದಕ್ಕುವುದಿಲ್ಲ. ವಿಧವಾ ಪರಿಹಾರ ಕೇಳಲು ಹೆಂಗಸರಿಗೆ 40 ವರ್ಷದ ಮೇಲಿರಬೇಕು. ಆದರೆ ಈ ಸಂಘಟನೆಯಲ್ಲಿ ವಿಧವೆಯಾಗಿರುವ ಬಹುತೇಕ ಮಹಿಳೆಯರ ವಯಸ್ಸು 20 ವರ್ಷದಿಂದ 30 ವರ್ಷಗಳ ಒಳಗಿನದು. ಎಂತಹ ವಿಪರ್ಯಾಸ! ನಿತಿನ್‌ದೇವಿ ಜೀವನ ನಿರ್ವಹಣೆಗಾಗಿ ನೇಯುವ ಕೆಲಸವನ್ನು ಮಾಡುತ್ತಾರೆ. ನಿತಿನ್‌ರಂತಹ ಎಷ್ಟು ಜನರ ಬದುಕು ಈ ಪ್ರಜಾಪ್ರಭುತ್ವ ವಿರೋಧಿ ಕಾನೂನಿನಡಿ ಹಿಸುಕಿ ಹೋಗುತ್ತದೆಯೋ? ಪ್ರಜಾಪ್ರಭುತ್ವ ಉಳಿಸಲು, ಇರೋಮ್ ಶರ್ಮಿಳಾ ಉಪವಾಸ ವ್ರತ ನಿಲ್ಲಿಸಲು, ನಿತಿನ್‌ರಂತಹ ಅಮಾಯಕರ ಬದುಕು ಸುಗಮವಾಗಲು, ಮಣಿಪುರದ ಬೀದಿಗಳಲ್ಲಿ ನಾರುತ್ತಿರುವ ಸಾವಿನ ಗಬ್ಬುವಾಸನೆಯನ್ನು ತೆಗೆಯಲು ನಾವೆಲ್ಲರೂ ಧ್ವನಿ ಎತ್ತಲೇಬೇಕಿದೆ. ಎಲ್ಲಿ, ಹೇಗೆ ಸಾಧ್ಯವೋ ಅಷ್ಟರ ಮಟ್ಟಿಗಾದರೂ ನಮ್ಮ ಪ್ರತಿಭಟನೆ ತೋರಿಸಿ ಈ ಸಮಾಜದ ಸ್ವಾಸ್ಥ್ಯವನ್ನು, ಪ್ರಜಾಪ್ರಭುತ್ವದ ಧ್ವನಿಯನ್ನು ಗಟ್ಟಿಗೊಳಿಸುವ ನೈತಿಕ ಹೊಣೆಯನ್ನು ಭಾರತೀಯ ಸಮಾಜದ ನಾಗರೀಕರು ಹೊರುವುದು ಅನಿವಾರ್ಯ. ನಮ್ಮೆದುರಿಗಿರುವ ಈ ದುರಂತಗಳನ್ನು ಗಮನಿಸಿ ಜವಾಬ್ದಾರಿಯಿಂದ ವರ್ತಿಸಬೇಕಾಗಿದೆ.

■ *ಎಚ್.ಎಸ್. ಚಂಪಾವತಿ*

*ಚಿತ್ರ ಸೌಜನ್ಯ: ನೇಮಿಚಂದ್ರ ಮತ್ತು ಜಗದೀಶ್*



# ಅವಲಂಬಿತರು

ಕಡಲ ದರ್ಪಣದಲಿ ಆಗಸದ ಛಾಯೆ
ನೀಲಿ ನೀಲಿ ಆದರೂ
ಸಮುದ್ರವೇ ಬೇರೆ ಬಾನೇ ಬೇರೆ

ದಿಗಂತದಂಚಿನಲಿ ಅಂಬರ
ಅಂಬುಧಿಗಳ ಮಿಲನ
ಕಂಡವರು ಯಾರು ಹತ್ತಿರಹೋಗಿ
ಅದೊಂದು ಮೃಗಜಲ
ಸತ್ಯಕ್ಕೆ ದೂರ

ಯಾರು ಯಾರಿಗೆ ಕೊಟ್ಟರು
ಯಾರು ಯಾರಿಂದ ಕದ್ದರು ಬಣ್ಣಗಳ?
ಮೀನ ಬಣ್ಣಗಳು ಆಗಸದಂಚಿನಲಿ
ಚಿಪ್ಪ ಮುತ್ತಿನಲಿ ಕಾಮನ ಬಿಲ್ಲು
ಮೂಡಿದ್ದು ಹೇಗೆ?

ಜಲಧಿಯಾಳವು ಹೆಚ್ಚೊ
ನಭದ ಗಹನವು ಹಿರಿದೊ
ಉದ್ದಗಲ ಘನರಾಶಿಯಿಂದ
ಗುರುತಿಸಲು ಬಹುದೆ ಮಹತಿಯ?

ಮುಗಿಲಿಂದ ಮಳೆ ಸುರಿದು
ಒಂದಾಗುತ್ತದೆ ಶರಧಿ ಎದೆಯಲ್ಲಿ
ಕಡಲು ಮೇಲೇರಿ ಆಡುತ್ತದೆ
ಗಗನದ ತೊಡೆಏರಿ

ಯಾರಿದ್ದಾರೆ ಪರಿಪೂರ್ಣರು
ಸರ್ವಶಕ್ತ ಸ್ವತಂತ್ರರು
ಪರರ ಹಂಗಿಲ್ಲದೆ ಬದುಕುವವರು?
ಅಲ್ಲವೆ
ಎಲ್ಲರೂ ಅವಲಂಬಿತರು?

■ ಶ್ವೇತಾ ನರಗುಂದ




# ಬಿದಿರಿನ ಬುಟ್ಟಿ

■ ಊರ್ಮಿಳಾ ಪವಾರ್

*ಅನು: ಮಂಗ್ಳೂರ ವಿಜಯ*

ಫಣಸ್‌ವಳೆ, ಒಂದು ಚಿಕ್ಕ ಊರು. ನಮ್ಮ ಮುತ್ತಜ್ಜ ಹರಿ, ಪುಣೆಯಲ್ಲಿ ಬ್ರಿಟಿಷ್ ಸೇನೆಯಲ್ಲಿದ್ದ. ವರ್ಷಕ್ಕೊಮ್ಮೆ ಅಥವಾ ಎರಡು ಬಾರಿ ಊರಿಗೆ ಬರುತ್ತಿದ್ದ, ಆತ ಬರುತ್ತಿದ್ದುದು ಮದುವೆಗಳ ಕಾಲದಲ್ಲಿ. ಊರಿನಲ್ಲಿ ಮಹಾರ್–ಚಮ್ಮಾರರ ಮದುವೆಗಳಿಗೂ ಭಟ್ಟರ ಆಶೀರ್ವಾದ ಕಡ್ಡಾಯ. ಆದರೆ ಅವರೇನೂ ಇವರ ಓಣಿಗೆ ಬಂದು, ಮನೆ ಮುಂದೆ ಮದುವೆ ಮಾಡಿಸುತ್ತಿರಲಿಲ್ಲ. ಮಹಾರ್–ಚಮ್ಮಾರ್ ವಾಡಾದ ಹೊರಗೆ ದೂರದಲ್ಲಿನ ಯಾವುದೋ ಮರದ ಕೆಳಗೆ ಕುಳಿತಿರುತ್ತಿದ್ದರು. ಅವರು ಅಲ್ಲಿಗೆ ಬರುವ ಮೊದಲೇ ದಕ್ಷಿಣೆ, ಎಲೆ–ಅಡಿಕೆ, ದಿನಸಿ ಮುಂತಾದವುಗಳನ್ನು ಮರದ ಕೆಳಗೆ ಇಡಬೇಕಿತ್ತು; ಅವರು ಅಲ್ಲಿಂದಲೇ ಏನೇನೋ ಮಂತ್ರ ಕಿರುಚುತ್ತಿದ್ದರು. ಇಲ್ಲಿ ಮಹಾರ್–ಚಮ್ಮಾರ್ ವಧು–ವರ ತಮ್ಮ ನಡುವೆ ಅಡ್ಡವಾಗಿ ಹಿಡಿದಿದ್ದ ಬಿಳಿ ಬಟ್ಟೆ ಕೆಳಗಿಳಿದ ಬಳಿಕ ಪರಸ್ಪರರಿಗೆ ಹಾರ ಹಾಕುತ್ತಿದ್ದರು; ವರ ತಾಳಿ ಕಟ್ಟುತ್ತಿದ್ದ. ಅತ್ತ ಭಟ್ಟ ತನ್ನ ದಕ್ಷಿಣೆ–ದಿನಸಿ (ಅಕ್ಕಿ–ಬೇಳೆ–ಬೆಲ್ಲ ಇತ್ಯಾದಿ)ಗಳನ್ನು ಕೊಂಡೊಯ್ಯುತ್ತಿದ್ದ.

ಇಂಥ ಎಷ್ಟೋ ಮದುವೆಗಳನ್ನು ಹತ್ತಾರು ವರ್ಷಗಳಲ್ಲಿ ಮುತ್ತಜ್ಜ ಕಂಡಿದ್ದ. ಆತನ ಮೇಲೆ, ಆಗ (1873) ಸ್ಥಾಪನೆಯಾಗಿದ್ದ ಮಹಾತ್ಮಾ ಫುಲೆ ಅವರ 'ಸತ್ಯಶೋಧಕ ಸಮಾಜ'ದ ಪ್ರಭಾವವೂ ಆಗಿರಬೇಕು. ತನ್ನ ಊರಿನಲ್ಲಿ ಮದುವೆಗಳು ಈ ರೀತಿ ನಡೆಯುವುದು ಅಪಮಾನ ಎನಿಸಿತು. ಇದನ್ನು ಬದಲಿಸಬೇಕೆಂಬ ನಿರ್ಧಾರವನ್ನು ಆತ ಮಾಡಿದ.

ಒಂದು ವರ್ಷ ಊರಿಗೆ ಬಂದಾಗ ಮಹಾರ್–ಚಮ್ಮಾರ್ ಮುಖಂಡರನ್ನು ಕರೆಯಿಸಿ, ಈ ರೀತಿ ಮದುವೆ ಮಾಡುವುದನ್ನು ಕೈಬಿಡುವ, ನಮ್ಮವರೇ ಒಬ್ಬರು ಭಟ್ಟರಾಗಿ ಕೆಲಸ ಮಾಡುವ ಸಲಹೆ ನೀಡಿದ,

ಈ ವಿಷಯ ಹರಡಿದಾಗ ಭಟ್ಟ ಗಾಬರಿಯಾದ. ತನ್ನ ಆದಾಯಕ್ಕೆ ಸಂಚಕಾರ ಬಂದೀತೆಂಬ ಆತಂಕ ಆತನಿಗೆ. ಒಂದೆರಡು ವಾರ 'ಅದ್ಹೇಗಾಗುತ್ತೆ?' ಎಂದು ಗೊಣಗಾಡಿದ. ಆದರೆ, ಮಾರನೇ ವರ್ಷದಿಂದಲೇ ಮಹಾರ್–ಚಮ್ಮಾರರು ಈ ನಿರ್ಣಯವನ್ನು ಜಾರಿಗೆ ತಂದಾಗ, ಕೈ ಕೈ ಹಿಸುಕಿಕೊಂಡ. ಇತ್ತ ಮಹಾರ್–ಚಮ್ಮಾರರಲ್ಲಿ ಭಟ್ಟರಾಗಲು ಯಾರೂ ತಯಾರಾಗದಿದ್ದಾಗ, ಸೇನೆಯ ಕೆಲಸ ಬಿಟ್ಟು ಮುತ್ತಜ್ಜ ಹರಿ ತಾನೇ ತಯಾರಾದ. ಈ ವಿಷಯ ಅಕ್ಕ ಪಕ್ಕದ ಊರುಗಳಿಗೆ ಹರಡಿತು. ಮುತ್ತಜ್ಜ ಹರಿ, ಸುತ್ತಲ ಒಂಬತ್ತು ಊರುಗಳ ಮಹಾರ್, ಚಮ್ಮಾರ ಕಾಲೊನಿಗಳಿಗೆ ಭಟ್ಟನಾದ.

ಈ ವಿಷಯ ಬಾಲ್ಯದಲ್ಲಿ ತಿಳಿದಾಗ ಮುತ್ತಜ್ಜನ ಬಗ್ಗೆ ನನಗೆ ಅಭಿಮಾನ ಮೂಡಿತು.

ಮುತ್ತಜ್ಜನ ವೃತ್ತಿಯನ್ನೇ ಅಜ್ಜ ಚಿಮಾಜಿ ಮುಂದುವರೆಸಿದರೂ, ತನ್ನ ಮಗನನ್ನು (ಅಂದರೆ ನನ್ನ ತಂದೆಯನ್ನು) ಮಾತ್ರ ಶಾಲೆಗೆ ಸೇರಿಸಬಯಸಿದ.

ಮುಂಬಯಿಗೆ ಹತ್ತಿರದ ಕೊಂಕಣ ಕರಾವಳಿಯ ಹಳ್ಳಿಯೊಂದರ [illegible] ಹವಾಮಾನದಲ್ಲಿ ಹುಟ್ಟಿ ಬೆಳೆದವರು ಊರ್ಮಿಳಾ. ಹಳ್ಳಿಯ ನಡುಭಾಗದಲ್ಲಿ ದಲಿತ ಮಹಾರರ ವಸತಿಗಳಿದ್ದವು. ಮೇಲ್ಜಾತಿಯವರು ತಮಗೆ ಅಸಹ್ಯಕರವೆನಿಸುವ ಕೆಲಸಗಳನ್ನು ಇವರಿಂದ ಮಾಡಿಸಲು ಯಾವಾಗ ಬೇಕಾದರೂ, ಎಲ್ಲ ದಿಕ್ಕಿನಿಂದಲೂ ಕರೆ ಕಳಿಸಲು ಅನುಕೂಲವಾಗಲೆಂದು ಮಾಡಿದ್ದ ಏರ್ಪಾಟು ಇದು. ಇದೇ ಹೊತ್ತಿಗೆ ಎಲ್ಲಾ ದಿಕ್ಕುಗಳಿಂದಲೂ ಸುಲಭವಾಗಿ ಆಕ್ರಮಣಕ್ಕೂ ಒಳಗಾಗುವ ನಿರಂತರ ಭೀತಿಯಲ್ಲೇ ದಲಿತರು ಬದುಕಬೇಕಿತ್ತು. "ಬಹುಶಃ ಈ ಹೆದರಿಕೆಯೇ ನಮ್ಮ ಜನರಿಗೆ ದೇಹವನ್ನು ಆಮೆಯ ಹಾಗೆ ಮುದುಡಿಕೊಂಡಿರುವುದನ್ನೂ, ಬಸವನಹುಳದಂತೆ ನಿಧಾನವಾಗಿ ಚಲಿಸುವುದನ್ನೂ ರೂಢಿಸಿರಬೇಕು" ಎನ್ನುತ್ತಾರೆ ಊರ್ಮಿಳಾ.

ತಮ್ಮ ಹಳ್ಳಿಯನ್ನು ಬಿಟ್ಟು ಮುಂಬೈ ಸೇರಿದ ಊರ್ಮಿಳಾ, ದಲಿತರ ಹಕ್ಕುಗಳಿಗಾಗಿ ಹೋರಾಟ ನಡೆಸಿದವರು; ದಲಿತ ಸಾಹಿತ್ಯ ಚಳವಳಿಯಲ್ಲಿ ಪ್ರಮುಖ ಹೆಸರೆನಿಸಿದವರು. ಅವರು ಬರೆಯುವುದು ಮರಾಠಿ ಭಾಷೆಯಲ್ಲಿ ಮಾತ್ರ. ಆದರೂ ಭಾರತದಾದ್ಯಂತವೂ ಅವರ ಕೀರ್ತಿ ಹರಡಿದೆ.

ಊರ್ಮಿಳಾ ಪವಾರ್ ದಲಿತ ಹೋರಾಟಗಾರ್ತಿ. ಅನೇಕ ಖ್ಯಾತ ಪ್ರಶಸ್ತಿ ಪಡೆದುಕೊಂಡಿರುವ ಲೇಖಕಿ. ಮೂರು ತಲೆಮಾರುಗಳ ದಲಿತ ಮಹಿಳೆಯರ ಬದುಕಿನ ಅನುಭವವನ್ನು 'ಆಯುದಾನ್' ಕೃತಿಯಲ್ಲಿ ಹೇಳಿದ್ದಾರೆ. ದಲಿತರಾಗಿ ಅಸ್ಪೃಶ್ಯರಾಗಿ ತಮ್ಮ ಜಾತಿಯ ಹೊರೆಯಿಂದ ಹೊರಬರಲು ಆ ಹೆಣ್ಣುಮಕ್ಕಳು ನಡೆಸಿದ ಹೋರಾಟವೇ ಈ ಆತ್ಮಕಥನದ ತಿರುಳು.

'ನನ್ನ ತಾಯಿ ಬಿದಿರಿನ ವಸ್ತುಗಳನ್ನು ಹೆಣೆಯುತ್ತಿದ್ದಳು. ಅವಳ ಆ ಹೆಣಿಗೆಯ ಕೆಲಸಕ್ಕೂ ನನ್ನ ಬರವಣಿಗೆಗೂ ಮೂಲಭೂತವಾದ ಸಂಬಂಧಗಳಿವೆ ಎಂದು ನಾನು ಕಂಡುಕೊಂಡಿದ್ದೇನೆ. ಹೆಣಿಗೆಯ ಕಾರ್ಯ ಎರಡಕ್ಕೂ ಒಂದೇ ರೀತಿಯದು. ಹೆಣೆಯುವಾಗಿನ ನೋವು, ಯಾತನೆ ಮತ್ತು ಸಂಕಟಗಳು ನಮ್ಮಿಬ್ಬರನ್ನೂ ಬೆಸೆದಿವೆ' ಎನ್ನುತ್ತಾರೆ ಊರ್ಮಿಳಾ. ವೈಯಕ್ತಿಕ ಬದುಕಿನ ಅಸಹನೀಯ ಮರಣಗಳನ್ನು ಮೀರಿ ನಿಲ್ಲಲು ಅವರು ನಡೆಸಿದ ನಿರಂತರ ಪ್ರಯತ್ನವನ್ನೂ, ರಾಜಕೀಯ–ಸಾಮಾಜಿಕ ಪರಿವರ್ತನೆಯ ಅಲೆಯೊಂದು ಬಲವಾಗಿದ್ದ ಕಾಲದಲ್ಲಿ ಮೂಡಿದ ಅರಿವಿನ ಎಚ್ಚರದ ಸಂಭ್ರಮವನ್ನೂ ಓದುಗರಿಗೆ ತಲುಪಿಸಲು ಯತ್ನಿಸುವ ಆತ್ಮೀಯ ಸ್ವಕಥನವೇ 'ಆಯುದಾನ್.'

*ಲೇಖಕಿ ಈ ಕೃತಿಯನ್ನು ಹೀಗೆ ಅರ್ಪಿಸುತ್ತಾರೆ:*

**ನನ್ನ ಹರಿಶ್ಚಂದ್ರನಿಗೆ**

ನನ್ನ - ಅವನ ತಂದೆ-ತಾಯಿಗಳಿಗೆ

ಮತ್ತು

**ನಮ್ಮೆರಡೂ ಕುಟುಂಬಗಳ ಬಂಧುಗಳಿಗೆ**

ಆಯುದಾನ್ ಕಾದಂಬರಿಯು ಮಾಯಾ ಪಂಡಿತ್ ಅವರಿಂದ ಇಂಗ್ಲಿಷ್‌ಗೆ ಅನುವಾದಗೊಂಡಿದ್ದು, 2009ರಲ್ಲಿ ಕೊಲಂಬಿಯಾ ಯೂನಿವರ್ಸಿಟಿ ಪ್ರೆಸ್ ಅದನ್ನು ಪ್ರಕಟಿಸಿತು. ಜಗತ್ತಿಗೆಲ್ಲ ಊರ್ಮಿಳಾರನ್ನು ಪರಿಚಯಿಸಿದ ಈ ಇಂಗ್ಲಿಷ್ ಅನುವಾದದ ಭಾರತೀಯ ಬೆಲೆ 1934/– ರೂ.ಗಳು!

–ವಿ.ಎಸ್.ಎಸ್.

## ಆತ್ಮಕತೆಗಾರ್ತಿಯ ಮಾತುಗಳು

*ಹೆಗಲ ಮೇಲೆ ಕೂರಿಸಿಕೊಂಡು ನನ್ನ ಬಾಲ್ಯದ ನೆನಪು ಚಿರಕಾಲ ಉಳಿಯುವುದಕ್ಕೆ ಕಾರಣರಾದ ನನ್ನ ಹಳ್ಳಿಯ ಹೆಣ್ಣುಮಕ್ಕಳ ವಾತ್ಸಲ್ಯ ಮರೆಯಲಾಗದು. ಈ ನೆನಪಿನ ಬುತ್ತಿ 'ಅಬಬ್ ಹತ್ತಿ' ಹೆಸರಿನ ಲೇಖನದ ಮೂಲಕ, ಬಾಲಕ ಬಾಲಕಿಯರಿಗಾಗಿ 1989ರಲ್ಲಿ ಪ್ರಕಟವಾದ ದೀಪಾವಳಿ ವಿಶೇಷಾಂಕದಲ್ಲಿ ಮೊದಲ ಬಾರಿಗೆ ಓದುಗರಿಗೆ ದೊರಕಿತು. ಇದು ನಂತರದ ನಾಲ್ಕಾರು ವರ್ಷಗಳಲ್ಲಿ 'ಅಕ್ಷರ', 'ಚಾರ್ವಾಕ', 'ಪ್ರೇರಕ ಲಲಕಾರಿ' ಪತ್ರಿಕೆಗಳಲ್ಲಿ ಮರು ಮುದ್ರಣಗೊಂಡಿತು.*

*ಉಷಾ ಮೆಹ್ತಾ ಅವರ ಒತ್ತಾಸೆ – ಆಗ್ರಹಗಳಿಂದಾಗಿ ನಾನು ಈ ಆತ್ಮ ಚರಿತ್ರೆ ಬರೆಯಲು ಸಾಧ್ಯವಾಯಿತು. ಶಾಂತಾರಾಮ ಪವಾರ್ ಪತ್ನಿ ಪ್ರಮೀಳಾ, ನನ್ನ ಅತ್ತಿಗೆ ನಿರ್ಮಲಾ ಕೃಷ್ಣ ಪವಾರ್, ನನ್ನ ಅಕ್ಕ ಶಾಂತಾಬಾಯಿ ಧರ್ಮಾಜಿ ಜಾಧವ್ ಮತ್ತು ಅಣ್ಣ ಶಾಹು ಅರ್ಜುನ ಪವಾರ್ ನನ್ನ ನೆನಪುಗಳನ್ನು ಕೆದಕಿದರು. ಸಿಸಿಲಿಯಾ ಕರ್ವಾಲೊ ಮತ್ತು ಕುಂದಾ ಪಮೀಳಾ ನೀಲಕಂಠ ಈ ಕೃತಿಯು ಹೆಚ್ಚು ಪರಿಪಕ್ವಗೊಳ್ಳಲು ಕಾರಣರಾಗಿದ್ದಾರೆ. ಕೃತಿ ಪ್ರಕಟಣೆಗೆ ಮುಂದಾದವರು ಸುಪ್ರಸಿದ್ಧ ಪ್ರಕಾಶನ ಸಂಸ್ಥೆ 'ಗ್ರಂಥಾಲಿ'ಯ ದಿನಕರ ಗಾಂಗಲ್ ಅವರು. ಇವರೆಲ್ಲರಿಗೆ ಆಭಾರಿಯಷ್ಟೇ ಅಲ್ಲ ನಾನು ಋಣಿಯಾಗಿದ್ದೇನೆ.*

*ನನ್ನ ಬದುಕಿನಲ್ಲಿ ಅತ್ಯಂತ ಮಹತ್ವದ ಕಾಲ 1950-56ರದ್ದು. ಮಹಾರಾಷ್ಟ್ರದಲ್ಲಿ ಧರ್ಮಾಂತರದ ಬಿರುಗಾಳಿ ಬೀಸಿದ ಕಾಲವದು. ನಾನು ಆಗ 5-10 ವರ್ಷದ ಹುಡುಗಿ. ಧರ್ಮ ಎಂದರೇನು? ಧರ್ಮಾಂತರ ಏಕೆ ಬೇಕು? ಇದನ್ನು ಛಲದಿಂದ ಪ್ರತಿಪಾದಿಸುವ ಬಾಬಾಸಾಹೇಬ್ ಅಂಬೇಡ್ಕರ್ ಯಾರು? ಅವರ ವ್ಯಕ್ತಿತ್ವ ಎಂಥದ್ದು? ಮುಂತಾದ ವಿಷಯ ಆಗ ನಮ್ಮಂಥ ಮಕ್ಕಳಿಗಿರಲಿ ಬಹುತೇಕ ಹಿರಿಯರಿಗೂ ತಿಳಿದಿರಲಿಲ್ಲ. ಆದರೂ, ಆ ಬಿರುಗಾಳಿಯಲ್ಲಿ ಸಹಸ್ರಾರು ಕುಟುಂಬಗಳು ಧರ್ಮಾಂತರಗೊಂಡವು. ಅವುಗಳಲ್ಲಿ ನಮ್ಮದೂ ಒಂದು. ನಮ್ಮ ರೀತಿ–ರಿವಾಜುಗಳು ಬದಲಾದವು. ಈ ಪ್ರಕ್ರಿಯೆಯಲ್ಲಿ ವಿದ್ಯೆಯತ್ತ ದಲಿತ ಕುಟುಂಬಗಳು ಒಲಿದವು. ದೇವರುಗಳ ಮೂರ್ತಿಗಳು ಎಸೆಯಲ್ಪಟ್ಟವು; ಅವುಗಳ ಜಾಗದಲ್ಲಿ ಬುದ್ಧ–ಅಂಬೇಡ್ಕರ್ ಮೂರ್ತಿಗಳು ಬಂದರೂ, ಈ ಮೂರ್ತಿಗಳ ಬಳಿ 'ನಮ್ಮ ಜೀವನದ ಅವಶ್ಯಕತೆಗಳನ್ನು, ಸುಖವನ್ನು ಕೇಳಬಾರದು; ಯಾವ ಕೋರಿಕೆಯನ್ನೂ ಮಾಡಿಕೊಳ್ಳದೆ ಗೌರವ ಅರ್ಪಿಸಬೇಕು; ಇದು ಇತರ ಧರ್ಮಗಳಂತಲ್ಲದೆ, ಸಾಮಾಜಿಕ ಶಕ್ತಿಯನ್ನು ಒದಗಿಸುವ ಜೀವನ ಮಾರ್ಗ' ಎಂಬ ಬೋಧನೆ ದೊರಕಿತು.*

*ಬಾಲ್ಯದಲ್ಲಿ ನನ್ನ ಕುತೂಹಲಕ್ಕೆ ಕಾರಣವಾದದ್ದು ಶ್ವೇತವಸ್ತ್ರ; ನಾಮಕರಣ, ವಿವಾಹ, ಅಂತ್ಯ ಸಂಸ್ಕಾರ ಸಂದರ್ಭಗಳಲ್ಲಿ ಶ್ವೇತವಸ್ತ್ರ ಧರಿಸಬೇಕೆಂಬ ನಿಬಂಧನೆ ಜಾರಿಗೊಳಿಸಲಾಯಿತು. ಶುಭ್ರ, ಸ್ವಚ್ಛ, ಕಲಂಕರಹಿತ ಬದುಕಿಗೆ ಇದು ಸಂಕೇತವೆಂದು ತಿಳಿಸಲಾಯಿತು. ಅಹಿಂಸೆಯ ವಿಚಾರ ಬಹುಮಟ್ಟಿಗೆ ಅರ್ಥವಾಯಿತು. ಹಿಂಸಾ ವ್ಯವಸ್ಥೆಯಲ್ಲಿ ಪ್ರೀತಿ–ವಿಶ್ವಾಸಗಳು ಇರಲು ಸಾಧ್ಯವಿಲ್ಲ; ಬಲಾತ್ಕಾರದಿಂದ ಹೃದಯ ಗೆಲ್ಲಲು ಸಾಧ್ಯವಿಲ್ಲ. ದ್ವೇಷವು ದ್ವೇಷವನ್ನೇ ಹೆರುತ್ತದೆ. ... ... ಎಂಬುದೆಲ್ಲಾ ಅರ್ಥವಾಯಿತು; ಆದರೆ, ಮಾಂಸಾಹಾರಕ್ಕೆ ಸಂಬಂಧಿಸಿದ ಹಿಂಸೆಯ ಪ್ರಶ್ನೆ ಅರ್ಥವಾಗಲಿಲ್ಲ. ತಥಾಗತರಿಗೂ ಮನದಟ್ಟಾಗಿತ್ತೆಂದು ಹೇಳಲಾದ 'ಜೀವೋ ಜೀವಸ್ಯ ಜೀವನಂ' ಉಕ್ತಿಯನ್ನು ಊರುಗೋಲಾಗಿಸಿಕೊಂಡು ಜೀವನ ಕಳೆದೆ. ಮುಂದೆ ನನಗೆ ಪರಿಚಯವಾಗಿದ್ದು ದಲಿತ ಸಾಹಿತ್ಯ/ಸಂಘಟನೆ/ಚಳವಳಿ. ಇದರೊಂದಿಗೆ ಜಾತಿ ಪದ್ಧತಿಯ, ಹಿಂದೂ ಧರ್ಮದ ಕರಾಳ ಮುಖ ಅರಿವಿಗೆ ಬಂತು. 'ದಲಿತ' ಪದ ಹಿಂದೂ ಧರ್ಮದಲ್ಲಿದ್ದ ಅಸ್ಪೃಶ್ಯರನ್ನು ಉಲ್ಲೇಖಿಸುವುದಾಗಿರದೆ, ಸಮಾಜ ವ್ಯವಸ್ಥೆಯಲ್ಲಿ ನಿರ್ಲಕ್ಷಿಸಲ್ಪಟ್ಟ, ದೂರವಿಡಲ್ಪಟ್ಟ, ಹತ್ತಿಕ್ಕಲ್ಪಟ್ಟ ವಿಜ್ಞಾನವಾದಿ–ಮಾನವತಾವಾದಿ ಸಮುದಾಯವನ್ನು ಉಲ್ಲೇಖಿಸುತ್ತದೆ ಎಂಬುದು ಮನವರಿಕೆಯಾಯಿತು. ಈ ತತ್ವಜ್ಞಾನಕ್ಕೆ ಬಾಬಾಸಾಹೇಬ್ ಅಂಬೇಡ್ಕರ್ ನೀಡಿದ ಕೊಡುಗೆ ಮಹತ್ವದ್ದೆನಿಸಿತು.*

*ಸಂವಿಧಾನಬದ್ಧ ಹಕ್ಕುಗಳಾದ ಶಿಕ್ಷಣ, ಮೀಸಲಾತಿಗಳಿಂದಾಗಿ ದಲಿತರಲ್ಲಿ ಈಗ ಸ್ಪಷ್ಟ ಮಧ್ಯಮ ವರ್ಗವೊಂದು ನಿರ್ಮಾಣಗೊಂಡಿದೆ. ಜಾತೀಯತೆಯ ರೂಪ ಬದಲಾಗಿದೆ. ಮಹಿಳೆಯರಿಗೂ ಶಿಕ್ಷಣ ದೊರಕಿದೆ. ಅವರಲ್ಲೂ ಜಾಗೃತಿ ಮೂಡಿದೆ. ಆದರೆ ದಲಿತ ಮಹಿಳೆಯರು ಇನ್ನೂ ಹೆಚ್ಚು ಹಿಂದುಳಿದಿದ್ದಾರೆ. ಅವರು ಒಂದೆಡೆ ಪುರುಷಪ್ರಧಾನ ದಲಿತ ಸಮುದಾಯದಿಂದ ಹಾಗೂ ಇನ್ನೊಂದೆಡೆ ಪುರುಷ ಪ್ರಾಧಾನ್ಯದ ವಿರುದ್ಧ ನಿಂತಿರುವುದಾಗಿ ಹೇಳಿಕೊಳ್ಳುತ್ತಿರುವ ಮಹಿಳಾ ಸಮುದಾಯದಿಂದ ಹತ್ತಿಕ್ಕಲ್ಪಟ್ಟಿದ್ದಾರೆ. ದಲಿತ ಮಹಿಳಾ ಸಮುದಾಯದಲ್ಲಿ 90%ಕ್ಕಿಂತ ಹೆಚ್ಚು ಭಾಗ ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ವಂಚಿತಗೊಂಡಿದೆ. ಇವರ ಬಗ್ಗೆ ಇನ್ನುಳಿದ 10%ರಷ್ಟು ಭಾಗ ಶಿಕ್ಷಣ–ಮೀಸಲಾತಿ ಪಡೆದಿದ್ದರೂ ಕಾಳಜಿ ವಹಿಸುತ್ತಿಲ್ಲ. ಉದಾರೀಕರಣ, ಜಾಗತೀಕರಣ, ಖಾಸಗೀಕರಣ ಹಾಗೂ ಧಾರ್ಮಿಕ ಪ್ರಭುತ್ವದ ಕೇಂದ್ರೀಕರಣಗಳಿಂದಾಗಿ ಶೋಷಿತ ವರ್ಗಗಳ ಬದುಕು ಇನ್ನೂ ದಯನೀಯವಾಗಿದೆ. ಈ ಸವಾಲನ್ನು ಎದುರಿಸಲು ನಾವು ಸಶಕ್ತರಾಗಬೇಕಿದೆ; ಸಶಕ್ತರಾಗುವವರೇ ಇಲ್ಲಿ ಉಳಿಯಲಿದ್ದಾರೆ.*

***25 ನವೆಂಬರ್ 2003***

ಆದರೆ ಊರಿನಲ್ಲಿ ಶಾಲೆ ಇರಲಿಲ್ಲ. ಆಗ ಪಂತೋಜಿ, ಊರಿನ ಹಾಗೂ ಸುತ್ತಮುತ್ತಲ ಬ್ರಾಹ್ಮಣ ಜಾತಿ ಮಕ್ಕಳಿಗೆ ಮಾತ್ರ ಪಾಠಶಾಲೆ ನಡೆಸುತ್ತಿದ್ದ. ಅಲ್ಲಿ ನನ್ನ ತಂದೆಗೆ ಅವಕಾಶ ಸಿಗಲಿಲ್ಲ.

ನನ್ನ ತಂದೆಯ ಅಕ್ಕನನ್ನು ಬ್ರಿಟಿಷ್ ಪೊಲೀಸ್ ಪಡೆಯಲ್ಲಿ ಹವಾಲ್ದಾರ್ ಒಬ್ಬರಿಗೆ ಮದುವೆ ಮಾಡಿಕೊಡಲಾಗಿತ್ತು. ಅವರದು ರತ್ನಾಗಿರಿ ಪಟ್ಟಣದ ಬಳಿಯ ಪರಟವಣೆ ಗ್ರಾಮ. ಅಲ್ಲಿ ಕ್ರೈಸ್ತ ಮಿಷನರಿ ಶಾಲೆ ನಡೆಸುತ್ತಿದ್ದರು. ಅದರಲ್ಲಿ ಮುಖ್ಯವಾಗಿ ಮಹಾರ್–ಚಮ್ಮಾರ್ ಮಕ್ಕಳೇ ಹೆಚ್ಚಿದ್ದರು. ಹೀಗಾಗಿ, ನನ್ನ ಅಜ್ಜ ಚಿಮಾಜಿ, ನನ್ನ ತಂದೆಯನ್ನು ಮಗಳ ಮನೆಗೆ ಕಳಿಸಿದರು. ಅಲ್ಲಿದ್ದುಕೊಂಡು ನನ್ನ ತಂದೆ ಶಾಲೆಗೆ ಸೇರಿದರು.

ಸಿನಲ್‌ಟೇಕಡಿಯಲ್ಲಿ ಮಿಷನರಿಯವರದು ಇನ್ನೊಂದು ಶಾಲೆಯಿತ್ತು. ಇಲ್ಲಿ ಶಿಕ್ಷಕರ ಅವಶ್ಯಕತೆ ಇತ್ತಾದ್ದರಿಂದ, ನನ್ನ ತಂದೆ ಏಳನೇ ತರಗತಿ ಮುಗಿಸುತ್ತಲೇ ಈ ಶಾಲೆಗೆ ಶಿಕ್ಷಕರಾಗಿ ನೇಮಕಗೊಂಡರು. ಶಾಲೆಯ ಅವಧಿ ಮುಗಿದ ಬಳಿಕ ಅವರು ಹತ್ತಿರದ ಪಟ್ಟಣದಲ್ಲಿನ ಬಟ್ಟೆ ಅಂಗಡಿಯೊಂದರಲ್ಲಿ ಕೆಲಸ ಮಡುತ್ತಿದ್ದರು.

ನನ್ನ ತಾಯಿಯನ್ನು ಮದುವೆಯಾದಾಗ ನನ್ನ ತಂದೆ ಇನ್ನೂ ವಿದ್ಯಾರ್ಥಿ. ಮಗಳನ್ನು ಕೊಡಲು ನನ್ನ ತಾತನಿಗೆ (ತಾಯಿಯ ತಂದೆಗೆ) ಇಷ್ಟವಿರಲಿಲ್ಲವಂತೆ. ಹುಡುಗ ಮಿಷನರಿ ಶಾಲೆಯಲ್ಲಿ ಓದುತ್ತಿದ್ದುದೇ ತಾತನ ದೃಷ್ಟಿಯಲ್ಲಿ ಅನರ್ಹತೆಯಾಗಿತ್ತಂತೆ. ಸೇನೆಯಲ್ಲಿದ್ದ ಮಗ ತಿಳಿ ಹೇಳಿದ ನಂತರ, ತಾತ ಒಪ್ಪಿದರಂತೆ.

ನನ್ನ ಅಣ್ಣಂದಿರು ಗೋವಿಂದ ಮತ್ತು ಬಬನ್ ಶಾಲೆಗೆ ಹೋಗುವ ಹೊತ್ತಿಗೆ, ನಮ್ಮ ಊರಿನ ಶಾಲೆಯಲ್ಲಿ ಬ್ರಾಹ್ಮಣ ಜಾತಿಯ ಮಕ್ಕಳಿಗಷ್ಟೇ ಅಲ್ಲದೆ, ಇತರ ಜಾತಿಯ ಮಕ್ಕಳಿಗೂ ಪ್ರವೇಶ ದೊರಕಿತ್ತು; ಆದರೆ ಮಹಾರ್–ಚಮ್ಮಾರ್ ಮಕ್ಕಳಿಗೆ ಮಾತ್ರ ದೊರಕಿರಲಿಲ್ಲ. ಅವರು ಶಾಲೆಯ ಹೊರಗೆ ದೂರದಲ್ಲಿ ಕುಳಿತಿರಬೇಕಿತ್ತು. ನನ್ನ ತಂದೆ ಬೇರೆ ಊರಿನ ಮಿಷನರಿ ಶಾಲೆಯಲ್ಲಿ ಪ್ರವೇಶ ಪಡೆದು ಶಿಕ್ಷಕರಾಗಿದ್ದರಷ್ಟೆ ಅವರು ಮಹಾರ್–ಚಮ್ಮಾರ್ ಮಕ್ಕಳಿಗೂ ಸೇರಿದಂತೆ ಎಲ್ಲಾ ಜಾತಿಯ ಮಕ್ಕಳು ಶಾಲೆಗೆ ಹೋಗಬೇಕೆಂದು ಭಾರೀ ಪ್ರಚಾರ ಮಾಡುತ್ತಿದ್ದರೆ, ಇತ್ತ ಅವರ ಮಕ್ಕಳು ಶಾಲೆಯಲ್ಲಿನ ತಾರತಮ್ಯ ಭಾವನೆ ಯಿಂದ ರೋಸಿ ಹೋಗಿ, ಶಾಲೆಗೆ ಚಕ್ಕರ್ ಹಾಕುತ್ತಿದ್ದರು!

ತಾವು ಶಿಕ್ಷಕರಾಗಿದ್ದ ಕರಬುಡೆ ಗ್ರಾಮಕ್ಕೆ ನನ್ನ ಅಕ್ಕ (ಶಾಂತಿ)ನನ್ನು ಕರೆದೊಯ್ದು ಓದಿಸಿದರು. ಆಕೆ ನಾಲ್ಕನೇ ತರಗತಿವರೆಗೆ ತಂದೆಯ ಜೊತೆಯಿದ್ದಳು. ಅಲ್ಲಿ ಮಾಧ್ಯಮಿಕ ಶಾಲೆ ಇಲ್ಲದ್ದರಿಂದ, ಆಕೆಯನ್ನು ತಮ್ಮ ಮಿತ್ರ ಜಾಧವ ಗುರೂಜಿ ಶಿಕ್ಷಕರಾಗಿದ್ದ ಶಾಲೆಗೆ ಸೇರಿಸಿದರು.

ಅಕ್ಕನನ್ನು ಶಾಲೆಗೆ ಕಳಿಸುವುದಕ್ಕೆ ತಾಯಿಯ ಒಪ್ಪಿಗೆಯಿರಲಿಲ್ಲ. 'ಈ ವರ್ಷ ಅಥವಾ ಮುಂದಿನ ವರ್ಷ ಮದುವೆಯಾಗಿ ಹೋಗುವವಳು, ಅವಳಿಗೇಕೆ ಹೆಚ್ಚಿನ ಓದು?' ಎಂಬುದು ತಾಯಿಯ ವಾದ. ಆದರೂ ಅಕ್ಕ ಏಳನೇ ತರಗತಿ ಮುಗಿಸಿದಳು. ತಾಯಿಯ ಒತ್ತಾಯ ಹೆಚ್ಚಿದಾಗ, ಹತ್ತಿರದ ಊರಿನ ಧರ್ಮಾಜಿ ಮಾಸ್ತರ್ ಮಗನೊಂದಿಗೆ ಅಕ್ಕನ ಮದುವೆಯಾಯಿತು; ಮದುಮಗ ಕೂಡ ಶಿಕ್ಷಕನಾಗಿದ್ದ, ಮದುವೆಯ ಹೊತ್ತಿಗೆ ಅಕ್ಕನಿಗೂ ಬುದ್ಧಿಮಾಂದ್ಯರ ಆಸ್ಪತ್ರೆಯೊಂದರಲ್ಲಿ ಕೆಲಸ ಸಿಕ್ಕಿತ್ತು. ಎರಡನೇ ಅಕ್ಕ ಮಂಜುಳಾ, ಅಣ್ಣಂದಿರು ಅಚ್ಯುತ, ಕೃಷ್ಣ ಮತ್ತು ಶಾಹು.

1945ರಲ್ಲಿ ನಾನು ಹುಟ್ಟಿದೆ; ಮನೆ ಚಿಕ್ಕದು; ಆದಾಯ ತಂದೆಯೊಬ್ಬರದೇ. ಜನ ಮಾತ್ರ ವಿಪರೀತ. ತಂದೆ-ತಾಯಿ ಇಬ್ಬರೂ ಹಗಲಿರುಳೂ ಕೆಲಸ ಮಾಡಿ ಸಂಪಾದಿಸಬೇಕಿತ್ತು. ಇಂಥ ಸಂದರ್ಭದಲ್ಲಿ ಶಾಂತಿ ಅಕ್ಕ ಕೆಲಸ ಬಿಡುವ ವಿಷಯ ಹೇಳಿ ಕಳಿಸಿದ್ದಳು. ಅಪ್ಪ ಅಲ್ಲಿಗೆ ಧಾವಿಸಿ ಹೋದ –ಮಗಳು ಕೆಲಸ ಬಿಟ್ಟರೆ, ಯಾವುದಾದರೂ ಕಾರಣಕ್ಕೆ ತನ್ನ ಮೇಲೆ ಇನ್ನಷ್ಟು ಆರ್ಥಿಕ ಹೊರೆ ಬಿದ್ದೀತೆಂದು ಅಪ್ಪ ಭಾವಿಸಿರಲೂಬಹುದು.

ಅಪ್ಪ ಹೋಗುತ್ತಲೇ, ಶಾಂತಿ ಅಕ್ಕ "ನಾನು ಕೆಲಸ ಮಾಡುತ್ತಿದ್ದ ಆಸ್ಪತ್ರೆಯಲ್ಲಿ ಬುದ್ಧಿಮಾಂದ್ಯರೂ ಸೇರಿದಂತೆ ಎಲ್ಲರೂ ನನ್ನ ಜಾತಿಯನ್ನು ಎತ್ತಿ ಹೇಳಿ ಅವಮಾನ ಮಾಡುತ್ತಿದ್ದಾರೆ, ಅದಕ್ಕೆ ಕೆಲಸ ಬಿಡಲು ನಿರ್ಧರಿಸಿರುವೆ" ಎಂದು ಹೇಳಿದಾಗ, ಅಪ್ಪ ಹೇಳಿದ ಸಮಾಧಾನದ ಮಾತು ಇಂದಿಗೂ ನನಗೆ ನೆನಪಿದೆ.

"ನಾವು ಮಹಾರರಿರುವುದು ನಿಜ; ಸಮಾಜದಲ್ಲಿ ನಮಗೆ ಕನಿಷ್ಠ ಸ್ಥಾನ ಇರುವುದೂ ನಿಜ; ಇದನ್ನು ನಾವು ಕೇಳಿ ಪಡೆದುಕೊಂಡಿಲ್ಲ; ಸವರ್ಣೀಯ ಸಮಾಜ ಇದನ್ನು ನಮಗೆ ನೀಡಿದೆ. ನಮಗೆ ಇದು ಬೇಕಿಲ್ಲ. ನಾವು ಹಿಂದೂಗಳಲ್ಲ ಎಂದರೂ ಅದು ಒಪ್ಪುತ್ತಿಲ್ಲ. ಆದರೂ ನಾವು ಈ ಸ್ಥಾನವನ್ನು ತಿರಸ್ಕರಿಸಿದ್ದೇವೆ. ಹೀಗಿರುವಾಗ ಅವರು ನಮ್ಮನ್ನು ಅವಮಾನಿಸುವುದನ್ನು ಪ್ರಶ್ನಿಸುತ್ತಾ, ಅವರಿಗೇ ಸವಾಲು ಹಾಕುತ್ತಾ ಬದುಕಬೇಕೇ ಹೊರತು, ಪಲಾಯನ ದಾರಿ ಹಿಡಿಯಬಾರದು. ಮೇಲಾಗಿ, ಅವರಲ್ಲಿ ಅರ್ಧಕ್ಕಿಂತ ಹೆಚ್ಚು ಜನ ಬುದ್ಧಿಮಾಂದ್ಯರು; ಯಾರದೋ ಮಾತು ಕೇಳಿ ಹೀಗೆ ನಾಲ್ಕು ದಿನ ಮಾಡ್ತಾರೆ... ..." ಅಪ್ಪನ ಮಾತುಗಳು ಶಾಂತಿ ಅಕ್ಕನಿಗೆ ಹಿಡಿಸಿರಬೇಕು; ಆಕೆ ಕೆಲಸ ಬಿಡುವ ಮಾತನ್ನು ಮತ್ತೆ ಆಡಲಿಲ್ಲ.

ನಾನು ಎರಡು ವರ್ಷದವಳಿದ್ದಾಗ, ಅಜ್ಜ ತೀರಿಕೊಂಡರು. ಪ್ರಾಥಮಿಕ ಶಾಲೆ ಸೇರಿ ಮೂರನೇ ತರಗತಿಯಲ್ಲಿದ್ದಾಗ ತಂದೆ ನಿಧನರಾದರು.

ನನಗೆ ಶಾಲೆಗೆ ಹೋಗಲು ಆಸಕ್ತಿಯೇ ಇರಲಿಲ್ಲ. ನಮ್ಮನ್ನು ದೂರ ಕುಳ್ಳಿರಿಸುತ್ತಿದ್ದರು. ನಾವು ಸ್ಲೇಟಿನಲ್ಲಿ ಬರೆದುದನ್ನು ದೂರದಿಂದಲೇ ನೋಡಿ, ಶಿಕ್ಷಕರು ಕಲ್ಲು/ಕೋಲುಗಳಲ್ಲಿ ಹೊಡೆದು ಶಿಕ್ಷಿಸುತ್ತಿದ್ದರು. ನಾಲ್ಕನೇ ತರಗತಿ ಪರೀಕ್ಷೆಯಲ್ಲಿ ನಾನು ಫೇಲಾದೆ. ಅವ್ವ, ತಮ್ಮ ಎಲ್ಲರೂ ರೇಗಾಡಿದರು. ಅಕ್ಕ ಮಾತ್ರ ಹತ್ತಿರ ಕುಳ್ಳಿರಿಸಿಕೊಂಡು ಸಮಾಧಾನ ಹೇಳಿ, ಮುಂದೆ ಚೆನ್ನಾಗಿ ಅಭ್ಯಾಸ ಮಾಡಲು ತಿಳಿಸಿದಳು. ನಂತರ ಮನಸ್ಸುಗೊಟ್ಟು ಓದಿದೆ; ಹಿಂದಿನ ಅವಮಾನವನ್ನು ಕಳೆದುಕೊಂಡೆ. ಮುಂದಿನ ಎಲ್ಲಾ ತರಗತಿಗಳಲ್ಲಿ ಉತ್ತಮವಾಗಿ ಅಭ್ಯಾಸ ಮಾಡಿದೆ.

ಆರನೇ ತರಗತಿಯಲ್ಲಿ ಬ್ರಾಹ್ಮಣ ಜಾತಿಯ ಶಿಕ್ಷಕಿಯೊಬ್ಬರು ಬಂದರು. ಅವರು ಎಲ್ಲಾ ವಿದ್ಯಾರ್ಥಿಗಳನ್ನು ಸಮಾನವಾಗಿ ಕಾಣುತ್ತಿದ್ದರು. ನಮ್ಮನ್ನೂ

## ಅನುವಾದಕರ ಮಾತು

ಮರಾಠಿ ದಲಿತ ಆತ್ಮಕತೆಗಳ ಬಗ್ಗೆ ನನಗೆ ಮೊದಲಿನಿಂದಲೂ ವಿಶೇಷ ಆಸಕ್ತಿ. ವಿವಿಧ ದಲಿತ ಲೇಖಕರು ಬರೆದ ಆತ್ಮಕತೆಗಳನ್ನು ಮೂಲ ಮರಾಠಿಯಲ್ಲೇ ಓದಿ, ಮಾನಸಿಕವಾಗಿ-ಬೌದ್ಧಿಕವಾಗಿ ಆಘಾತ ಗೊಂಡು ಮನುಷ್ಯಲೋಕದ ವ್ಯಾಪಾರಗಳ ಬಗ್ಗೆ ವಿಹ್ವಲಿತನಾಗಿದ್ದೆ. ಭಾರತದಲ್ಲಿ ಜಾತಿಪದ್ಧತಿಯು ತೋರಿರುವ ಕ್ರೌರ್ಯ, ಉಂಟು ಮಾಡಿರುವ ಭಯಾನಕ ಪರಿಣಾಮಗಳನ್ನು ಅರಿತು ಆಕ್ರಂದನದ ಚೀತ್ಕಾರ ಹೊರಟ ಅನುಭವವಾಗಿತ್ತು.

ಮರಾಠಿ ದಲಿತ ಮಹಿಳೆಯರ ಕೆಲವು ಆತ್ಮಕತೆಗಳನ್ನು, ಇನ್ನೂ ಕೆಲವು ಆತ್ಮಕತೆಗಳ ಭಾಗಗಳನ್ನು ಓದಿದಾಗಲಂತೂ ಹೃದಯ ಧ್ವಂಸಗೊಂಡಿತು. ಜಾತಿಪದ್ಧತಿಯ ಲಾಭವನ್ನು ಸವರ್ಣೀಯರು ಕೊಳ್ಳೆ ಹೊಡೆದಿದ್ದರೆ, ದಲಿತ ಮಹಿಳೆಯ ಆತ್ಮಬಲದ ಮೇಲೆ ಆಕ್ರಮಣ ಮಾಡಿ ಮೆರೆದ ಪುರುಷಾಧಿಪತ್ಯದ ಪಾಲಿನಲ್ಲಿ ದಲಿತ ಪುರುಷರೂ ಸೇರಿಕೊಂಡಿದ್ದು ಹೃದಯ ಜ್ವಾಲೆಗಳನ್ನು ಭಗ್ಗನೆ ಎಬ್ಬಿಸಿತ್ತು.

ಮಹಾರಾಷ್ಟ್ರದಲ್ಲಾಗಲಿ, ನಮ್ಮ ಕರ್ನಾಟಕದಲ್ಲಾಗಲಿ ದಲಿತ ಚಳವಳಿಯು ತಾನಾದರೂ ಪುರುಷಾಧಿಪತ್ಯದ ಪಾಪದಲ್ಲಿ ಪಾಲುದಾರ ವಾಗಲು ತಿರಸ್ಕರಿಸುವುದನ್ನು ಕಾಣುವ ಮನದಾಳದ ಹಂಬಲ ಇನ್ನೂ ಕೈಗೂಡಬೇಕಿದೆ.

* * *

ಬೆಂಗಳೂರಿನ ಗಾಂಧಿನಗರದಲ್ಲಿ ಮಹಾರಾಷ್ಟ್ರ ಮಂಡಲದ ಗ್ರಂಥಾಲಯವೊಂದಿದೆ. ಸದಸ್ಯನಾಗಿ ನಾನು ಅಲ್ಲಿಂದ ಅಪಾರ ಪ್ರಯೋಜನವನ್ನು ಪಡೆದಿರುವೆ. ಪ್ರಸ್ತುತ ನಿಮ್ಮ ಕೈಯಲ್ಲಿರುವ ಕಾದಂಬರಿ 'ಆಯದಾನ್' ನನಗೆ ಮೊದಲು ದೊರಕಿದ್ದು ಈ ಗ್ರಂಥಾಲಯದಲ್ಲೇ. ಅದನ್ನು ಓದಿದವನೆ ದಿಗ್ಮೂಢನಾದೆ. ದಲಿತ ಮಹಿಳಾ ಲೋಕದ ಅನಾವರಣ ಹೃದಯವನ್ನು ಆವರಿಸಿಕೊಂಡಿತು. ಆಗಲೇ ಅದನ್ನು ಅನುವಾದಿಸಲು ಮುಂದಾದೆ. ಇನ್ನಿತರ ಕೆಲಸ-ಕಾರ್ಯಗಳಿಂದಾಗಿ ಈ ಬಗ್ಗೆ ಮೂಲ ಲೇಖಕರೊಂದಿಗೆ ಮಾತನಾಡುವುದು ನಿಧಾನ ವಾಯಿತು. ಅನುವಾದ ಕಾರ್ಯ ಮುಗಿದು, ನಮ್ಮ 'ಸಂಬುದ್ಧ ಪ್ರಕಾಶನ'ದಿಂದಲೇ ಪ್ರಕಟಿಸುವ ನಿರ್ಧಾರ ಮಾಡಿ, ಅನುಮತಿಗಾಗಿ ಮೂಲ ಲೇಖಕರನ್ನು ಸಂಪರ್ಕಿಸಿದಾಗ, ಅವರಿಂದ ಈ ಬಗ್ಗೆ ಬೆಳಗಾವಿಯ ಖ್ಯಾತ ಅನುವಾದಕ ಪ್ರೊ. ಚಂದ್ರಕಾಂತ ಪೋಕಳೆ ಅವರು ಅನುಮತಿ ಪಡೆದಿರುವುದು ತಿಳಿದು ಬಂತು. "ಅವರು ಅನುವಾದಿಸಿದ್ದೂ ಕನ್ನಡದ ಓದುಗರಿಗೆ ದೊರಕಲಿ; ನಾನು ಅನುವಾದಿಸಿದ್ದೂ ದೊರಕಲಿ; ನೀವು ಅನುಮತಿಸಿದರೆ ನಾವು ಪ್ರಕಟಿಸಿ, ಕನ್ನಡಿಗರ ಮುಂದಿಡಲು ಸಿದ್ಧ" ಎಂದಾಗ, ಊರ್ಮಿಳಾ ಪವಾರ್ ಅವರು ಸಾಕಷ್ಟು ಸಂಕೋಚದಿಂದಲೇ "ಅದು ಸರಿ ಹೋಗಲಿಕ್ಕಿಲ್ಲ; ನಿಮಗೆ ಸೂಕ್ತವೆನಿಸಿದರೆ, ಈ ಕಾದಂಬರಿಯನ್ನು ಮಹತ್ವದ ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟಿಸಲು ನಾನು ಸಮ್ಮತಿಸುವೆ" ಎಂದರು. ನಾನು ಹೆಚ್ಚು ಒತ್ತಾಯ ಮಾಡಲು ಇಷ್ಟಪಡಲಿಲ್ಲ.

ಈಗ ಕನ್ನಡದಲ್ಲಿ ಸ್ವಾಯತ್ತ ಗುಂಪಾಗಿ ತನ್ನ ವೈಶಿಷ್ಟ್ಯವನ್ನು ದಾಖಲಿಸಿರುವ 'ಮಾನಸ ಬಳಗ'ವು ತನ್ನ ಪತ್ರಿಕೆಯಲ್ಲಿ ಈ ಕಾದಂಬರಿಯನ್ನು ಧಾರಾವಾಹಿಯಾಗಿ ಪ್ರಕಟಿಸಲು ನಿರ್ಧರಿಸಿರುವುದು ನನಗೆ ಹೆಮ್ಮೆಯ ವಿಷಯವೇ. ಈ ಪತ್ರಿಕೆಯ ಮೂಲಕ ಊರ್ಮಿಳಾ ಪವಾರ್ ಅವರ ಅನನ್ಯ ಅನುಭವ ಕನ್ನಡ ಓದುಗರಿಗೆ ಲಭ್ಯ ವಾಗುತ್ತಿರುವುದು ಅತ್ಯಂತ ಸಂತೋಷದ ಸಂಗತಿ. 'ಮಾನಸ ಬಳಗ'ಕ್ಕೆ ನಾನು ಋಣಿ.

**ಮಂಗ್ಳೂರ ವಿಜಯ**
ವಿದ್ಯಾ ಟ್ಯುಟೋರಿಯಲ್ಸ್ ಪಕ್ಕ, ವಿ. ನಾಗನಹಳ್ಳಿ,
ಬೆಂಗಳೂರು-560 032 (ದೂರವಾಣಿ: 080-2354 7915)

ಹತ್ತಿರ ಕರೆದು ಓದಿಸುತ್ತಿದ್ದರು. ಅವರು ಪ್ರಾರಂಭಿಸಿದ ವಿಶೇಷವೆಂದರೆ, ಪ್ರತಿ ಶನಿವಾರ ಎಲ್ಲಾ ಮಕ್ಕಳ ಮುಖ, ಮೂಗು, ಕಣ್ಣು, ಕತ್ತು ಎಲ್ಲವನ್ನೂ ಹತ್ತಿರದಿಂದ ನೋಡಿ, ಶುಚಿಯಾಗಿರಬೇಕೆಂದು ತಿಳಿಸಿ ಹೇಳುತ್ತಿದ್ದರು. ಪರಿಣಾಮವಾಗಿ ವಾರಕ್ಕೊಮ್ಮೆ ಸ್ನಾನ ಮಾಡುತ್ತಿದ್ದ ನಾನು, ವಾರಕ್ಕೆರಡು ಮೂರು ಬಾರಿ ಸ್ನಾನ ಮಾಡತೊಡಗಿದೆ.

ಒಂದು ದಿನ ಈ ಶಿಕ್ಷಕಿ ನನ್ನನ್ನು ಹತ್ತಿರ ಕರೆದು, ಬೆನ್ನು ಚಪ್ಪರಿಸಿ ಶಹಭಾಶ್ ಎಂದು ಹೇಳಿದರು. ಎಲ್ಲ ಹುಡುಗ-ಹುಡುಗಿಯರು ಆಶ್ಚರ್ಯ ಚಕಿತರಾಗಿ ನೋಡುತ್ತಿದ್ದರು. ಶಿಕ್ಷಕಿ ಹತ್ತು ರೂಪಾಯಿಯ ಎರಡು ನಾಣ್ಯಗಳನ್ನು ಕೈಲಿ ಹಿಡಿದು, ಎಲ್ಲರಿಗೆ ತೋರಿಸುತ್ತಾ, 'ಈ ಶಾಲೆಯ ಎಲ್ಲಾ ಅಸ್ಪೃಶ್ಯ ಮಕ್ಕಳಿಗೆ ಸರ್ಕಾರದ ವಿದ್ಯಾರ್ಥಿ ವೇತನ ನೀಡಲಾಗುತ್ತಿದೆ' ಎಂದು ಘೋಷಿಸಿದರು. ತರಗತಿ ಮುಗಿದ ನಂತರ ನನ್ನನ್ನು ಹತ್ತಿರ ಕರೆದು 'ನಿನ್ನ ಬಟ್ಟೆ ಕೊಳೆಯಾಗಿರುತ್ತದೆ; ಈ ಹಣದಲ್ಲಿ ಇನ್ನೊಂದು ಜೊತೆ ಬಟ್ಟೆ ಕೊಡಿಸಿಕೊ' ಎಂದು ವಾತ್ಸಲ್ಯದಿಂದ ಹೇಳಿದರು.

ನನ್ನನ್ನು ನಾನೇ ನಂಬದಾದೆ. ಅಷ್ಟೂ ಹಣ ಒಯ್ದು ಅಮ್ಮನಿಗೆ ನೀಡಿದಾಗ, ಆಕೆಯ ಕಣ್ಣುಗಳು ಒದ್ದೆಯಾದವು. ಕಾಲೊನಿಯಲ್ಲೆಲ್ಲಾ ಮಹಾರ್ ಮಕ್ಕಳದೇ ಸುದ್ದಿ.

ಮತ್ತೊಂದು ದಿನ ತರಗತಿಗೆ ಬಂದ ಹೆಡ್ ಮಾಸ್ತರ್ ದೇಸಾಯಿ 'ನಮ್ಮ ಊರಿನ ಹೊರಭಾಗದಿಂದ ಈ ದಿನ ವಿನೋಬಾಜಿಯವರ ಭೂದಾನ ಪಾದಯಾತ್ರೆ ಹಾದು ಹೋಗಲಿದೆ; ಎಲ್ಲರೂ ಅಲ್ಲಿಗೆ ಹೋಗಿ ಅವರಿಗೆ ಗೌರವ ಅರ್ಪಿಸೋಣ' ಎಂದು ತಿಳಿಸಿ, ನಮ್ಮನ್ನೆಲ್ಲ ಕರೆದೊಯ್ದರು. ವಿನೋಬಾಜಿಯವರನ್ನು ಕಂಡು ಧನ್ಯರಾದೆವು.

ಮಹಾಡ್‌ನಿಂದ ರಾಜಾಪೂರ್‌ವರೆಗಿನ ಭಾಗ ಮಧ್ಯ ಕೊಂಕಣ ಪ್ರದೇಶ. ಇದು ಉತ್ತರ ಮತ್ತು ದಕ್ಷಿಣ ಕೊಂಕಣ ಪ್ರದೇಶಕ್ಕಿಂತ ಹಿಂದುಳಿದದ್ದು. ಇಂಥ ಪ್ರದೇಶದಲ್ಲಿನ ಹಿಂದುಳಿದ ಸಮುದಾಯದ ಹುಡುಗಿ ನಾನು. ನಮಗೆ ಯಾವ ಸುಖ-ಸೌಲಭ್ಯಗಳೂ ಇರಲಿಲ್ಲ. ಬೇರೆಯವರ ಸ್ಥಿತಿಗೆ ನಮ್ಮದನ್ನು ನಾವು ಹೋಲಿಸಿಕೊಳ್ಳುತ್ತಲೂ ಇರಲಿಲ್ಲ; ನಮ್ಮದು ನಮಗೆ; ಅವರದು ಅವರಿಗೆ ಎಂಬ ಮನೋಭಾವ. ವಿಧಿ ಆಟದಲ್ಲಿ ನಂಬಿಕೆ.

ಅವರಿವರನ್ನು ಕಾಡಿ, ಬೇಡಿ ಅಮ್ಮ ಕಟ್ಟಿಸಿದ್ದ ಎರಡು ಕೋಣೆಗಳ ಮಣ್ಣಿನ ಮನೆಗೆ ಒಂದು ಮುಸ್ಲಿಮರ ಕುಟುಂಬ ಬಾಡಿಗೆಗೆ ಬಂತು. ಅವರ ಇಬ್ಬರು ಮಕ್ಕಳು ಬೇಬಿ ಮತ್ತು ಸಯೀದಾ ನನ್ನ ಆಪ್ತಮಿತ್ರರಾದರು. ಅವರೊಂದಿಗೆ ಆಟವಾಡುತ್ತಾ ನಾನು ಹಿಂದಿ ಕಲಿತೆ.

ರಂಜಾನ್ ಮುಗಿದ ಬಳಿಕ ಇವರಿಬ್ಬರೂ ರಾಜಿವಾಡಾದಲ್ಲಿನ ನೆಂಟರ ಮನೆಗೆ ತೆರಳಿದಾಗ, ನನ್ನನ್ನೂ ಕರೆದೊಯ್ದರು. ಒಂದು ಮನೆಯ ಮುಂದೆ ನಿಂತಾಗ, ಮನೆಯಾಕೆ ನಮ್ಮನ್ನು ಒಳಗೆ ಕರೆದರು. ನಾನು ಆಕೆಯನ್ನು ಗಮನಿಸಿದೆ. ಆಗೀಗ ನಮ್ಮ ಓಣಿಗೆ ಮೀನು ಮಾರಲು ಬರುತ್ತಿದ್ದಾಕೆ ಆಕೆ. ನನ್ನನ್ನು ಆಕೆಯೂ ಗಮನಿಸಿ, ಗುರುತಿಸಿರಬೇಕು. 'ಈ ಹುಡುಗಿ ಯಾರ ಮನೆಯವಳು?' ಎಂದು ಕೇಳಿದಳು. ಸಯೀದಾ ಉತ್ತರಿಸಿದ ತಕ್ಷಣ 'ನಿಮಗೆ ಬೇರೆ ಕಡೆ ಮನೆ ಸಿಗಲಿಲ್ಲವೆ? ಹೋಗಿ ಹೋಗಿ ಮಹಾರರ ಮನೆಯಲ್ಲಿ ಬಾಡಿಗೆಗೆ ಇದ್ದೀರಲ್ಲ?' ಎಂದು ಮುಖ ಹಿಂಡಿದಳು. 'ಏಯ್ ಹುಡುಗಿ, ಅಲ್ಲಿ ಬಂಡೆಯ ಮೇಲೆ ನಿಂತಿರು' ಎಂದು ನನಗೆ ಹೇಳಿ, ಅವರಿಬ್ಬರನ್ನೂ ಒಳಗೆ ಕರೆದೊಯ್ದಳು.

ನನಗೆ ಅವಮಾನವಾಯಿತು; ಏನು ಮಾಡಬೇಕೆಂದು ತಿಳಿಯಲಿಲ್ಲ, ಬಿಸಿಲಲ್ಲಿ ಬಂಡೆ ಮೇಲೆ ಮುಕ್ಕಾಲು ಗಂಟೆ ನಿಂತಿರಬಹುದು. ಬಳಿಕ ಇಬ್ಬರೂ ಹುಡುಗಿಯರು ಹೊರಬಂದರು. ಹಿಂದೆಯೇ ಬಂದ ಆ ಹೆಂಗಸು 'ನಿಮ್ಮಮ್ಮ ಹಸೀನಾಬಿಗೆ ಹೇಳ್ರಿ; ಇಲ್ಲೇ ಮನೆ ನೋಡಿ ಕೊಡ್ತೀನಿ; ಮಹಾರರ ಮನೆ ಮೊದಲು ಬಿಡ್ರಿ' ಎಂದು ಕಿರುಚಿ ಹೇಳಿದಳು.

ಆ ಹುಡುಗಿಯರು ನನಗೆ ಮುಖ ಕೊಟ್ಟು ಮಾತನಾಡಲಿಲ್ಲ. ತಾವು ಮುಂದೆ ಮುಂದೆ ನಡೆದರು; ನಾನೂ ಮೌನವಾಗಿ ಅವರನ್ನು ಹಿಂಬಾಲಿಸಿದೆ. ಅವರಿಗೆ ಭಾರವಾಯಿತೆಂದು ತಿಳಿದು, ಬರುವಾಗ ಒಂದು ಚೀಲವನ್ನು ನಾನು ಹಿಡಿದುಕೊಂಡಿದ್ದೆ. ಈಗ ಹಿಂತಿರುಗುವಾಗಲೂ ಅದನ್ನು ಗಮನಿಸಿ, ಒಂದನ್ನು ತೆಗೆದುಕೊಳ್ಳಲು ಹೋದರೆ ಸಯೀದಾ ಕಿತ್ತುಕೊಂಡಂತೆ ಮಾಡಿ, ಮುಂದೆ ಹೋದಳು.

ಮನೆ ತಲುಪುವವರೆಗೆ ನಾವು ಮಾತನಾಡಲಿಲ್ಲ. ಮನೆ ಬಂದಾಗ ಅವರು ಅವರ ಮನೆ ಒಳಗೆ ಹೋದರು; ನಾನು ನನ್ನ ಮನೆ ಒಳಗೆ ಹೋದೆ. ತುಸು ಹೊತ್ತಿನ ನಂತರ ಹಸೀನಾಬಿ "ಬರುವಾಗಲೂ ಅವಳನ್ನು ಮುಟ್ಟಿಸಿಕೊಂಡಿರಾ? ಈ ಬಿರಿಯಾನಿ ಯಾರು ತಿನ್ನುತ್ತಾರೆ?" ಎಂದು ಗೊಣಗುತ್ತಾ, ಬಿರಿಯಾನಿಯನ್ನು ಚೆಲ್ಲುತ್ತಿರುವುದನ್ನು ಕಿಟಕಿಯಿಂದ ಕಂಡೆ. ಈ ಪ್ರಕರಣದ ಬಳಿಕ ಬೇಬಿ ಮತ್ತು ಸಯೀದಾ ಎಂದೂ ನನ್ನೊಂದಿಗೆ ಮಾತನಾಡಲಿಲ್ಲ; ಕೆಲವೇ ದಿನಗಳಲ್ಲಿ ಈ ಕುಟುಂಬ ನಮ್ಮ ಮನೆ ಬಿಟ್ಟು ಹೋಯಿತು.

ದೇವರು, ಜನ್ಮ, ಭೂತ ಮುಂತಾದವುಗಳನ್ನು ಹಿರಿಯರು ನಂಬುತ್ತಿದ್ದರು. ಹರಕೆ, ಬಲಿಗಳೂ ಆಗಾಗ ನಡೆಯುತ್ತಿದ್ದವು. ಆದರೆ, ಹಲವರು ಧರ್ಮಾಂತರ ವಾಗಿದ್ದರಿಂದ ಇವಾವುದನ್ನೂ ನಂಬುತ್ತಿರಲಿಲ್ಲ.

* * *

ಬಾಬಾಸಾಹೇಬ್ ಅಂಬೇಡ್ಕರ್ 1956ರಲ್ಲಿ ಧರ್ಮಾಂತರ ಗೊಂಡರು. ಆಗ ನಮ್ಮ ಭಾಗದ ಜನರೂ ನಾಗಪುರಕ್ಕೆ ಹೋಗಿದ್ದರು. ಆಗ ನನಗೆ 11 ವರ್ಷ. ಬಾಬಾಸಾಹೇಬ್ ಅಂಬೇಡ್ಕರ್ ಯಾರು? ಧರ್ಮಾಂತರ ಎಂದರೇನು? ಮುಂತಾದ ವಿಷಯಗಳಾವುವೂ ನನಗೆ ತಿಳಿಯುತ್ತಿರಲಿಲ್ಲ. ನಾಗಪುರಕ್ಕೆ ಹೋಗಿ ಬಂದಿದ್ದ ನಾಥೂರಾಂ ಕಾಂಬಳೆ, ಹರಿಭಾವು ಆಯರೆ, ಬಂಡ್ಯಾ ಚವೇಕರ್, ಗೋಪಾಲ ಮಾಸ್ತರ್ ಮುಂತಾದವರು ಈ ಬಗ್ಗೆ ಹಳ್ಳಿ-ಹಳ್ಳಿಗಳಲ್ಲಿ ಪ್ರಚಾರ ಮಾಡುತ್ತಿದ್ದರು.

ಕೆಲವೇ ತಿಂಗಳಲ್ಲಿ ಬಾಬಾಸಾಹೇಬರು ನಿಧನರಾದ ಸುದ್ದಿ ರೇಡಿಯೋ ಮೂಲಕ ಬಿತ್ತರವಾಯಿತು. ಆ ದಿನ ನಾನು ಶಾಲೆಯಿಂದ ಬಂದಾಗ ನಾಥೂರಾಂ ಕಾಂಬಳೆ ಬಿಕ್ಕಿ ಬಿಕ್ಕಿ ಅಳುತ್ತಿರುವುದು ಕಂಡಿತು. ಅಮ್ಮ, ಮಂಜುಳಾ ಅಕ್ಕ, ಶಾಹು ಕೂಡ ಅಳುತ್ತಿದ್ದರು. ಅವರನ್ನು ನೋಡಿ ನನಗೂ ಅಳು ಬಂತು. 'ನಾನು ರಾತ್ರಿಯ ರೈಲು ಹಿಡಿದು ಮುಂಬಯಿಗೆ ಹೋಗಿ ಬರುತ್ತೇನೆ; ಬಾಬಾಸಾಹೇಬರ ಶರೀರ ದೆಹಲಿಯಿಂದ ಮುಂಬಯಿಗೆ ಬರಲಿದೆ; ನಾಳೆ ಬೆಳಿಗ್ಗೆ ಅವರ ದರ್ಶನ ಪಡೆದು ಬರುತ್ತೇನೆ......' ಎಂದು ಹೇಳುತ್ತಿದ್ದರು.

ಮಾರನೇ ದಿನ ರತ್ನಾಗಿರಿಯ ಗೋಗಟೆ ಕಾಲೇಜ್ ಮೈದಾನದಲ್ಲಿ ಸುತ್ತಮುತ್ತಲ ದಲಿತರು ನೆರೆದರು. ನಾನು, ಅಮ್ಮ, ಗೋವಿಂದ ದೊಡ್ಡಪ್ಪ, ಅಕ್ಕ, ಮತ್ತು ಇತರ ಹಲವರು ಹೋದೆವು. ಧ್ವನಿವರ್ಧಕದ ಮೂಲಕ ನಾನಾ ಸೂಚನೆಗಳನ್ನು ನೀಡಲಾಗುತ್ತಿತ್ತು. 'ಬುದ್ಧಂ ಶರಣಂ ಗಚ್ಛಾಮಿ' ಮಂತ್ರ ಗಗನ ಮುಟ್ಟುತ್ತಿತ್ತು.

ಎಷ್ಟೋ ದಿನಗಳಿಂದ ಗೋವಿಂದ ದೊಡ್ಡಪ್ಪ ಅಮ್ಮನಿಗೆ ಹಲವು ರೀತಿಯಲ್ಲಿ ತಿಳಿಸಿ ಹೇಳಿದ್ದುದರ ಪರಿಣಾಮವು ಆ ದಿನ ಕಂಡಿತು. ರತ್ನಾಗಿರಿಯಿಂದ ಬರುತ್ತಲೇ ಅಮ್ಮ ದೇವರುಗಳ ಮೂರ್ತಿ ಮತ್ತು ಚಿತ್ರಗಳನ್ನು ಒಂದು ಬಟ್ಟೆಯಲ್ಲಿ ಕಟ್ಟಿ ಹತ್ತಿರದ ಬಾವಿಯಲ್ಲಿ ಎಸೆದಳು.

ನಿಜವೆಂದರೆ, ಅಣ್ಣ-ಅಪ್ಪ ತೀರಿಕೊಂಡ ನಂತರ ಅಮ್ಮನಿಗೆ ದೇವರ ಮೇಲೆ ನಂಬಿಕೆ ಕುಸಿದು ಹೋಗಿತ್ತು. ಈಗ ಬಾಬಾಸಾಹೇಬರ ನಿಧನದ ಬಳಿಕ ಆಕೆ ದೃಢ ಮನಸ್ಸು ಮಾಡಿದ್ದಳು.

ಇದಕ್ಕೆ ಒಂದು ಚಳವಳಿ ರೂಪ ನೀಡಲು ಗೋವಿಂದ ದೊಡ್ಡಪ್ಪ ಮುಂದಾದ. ಅಂಗಡಿಯಲ್ಲಿ ಬಾಡಿಗೆ ಪೆಟ್ರೋಮ್ಯಾಕ್ಸ್ ತಂದು, ಕೇರಿಯಲ್ಲಿ ಮೆರವಣಿಗೆ ನಡೆಸಿ, ಎಲ್ಲರೂ ದೇವರುಗಳನ್ನು ಕಿತ್ತೆಸೆಯಬೇಕೆಂದು ಪ್ರಚಾರ ಮಾಡಿದ. ಬಾಬಾಸಾಹೇಬರ ಆದೇಶದಂತೆ ಬೌದ್ಧ ಧರ್ಮ ಸೇರಬೇಕೆಂದು ಕರೆಯಿತ್ತ.

ಈ ಪ್ರಚಾರಕ್ಕೆ ಒಳ್ಳೆಯ ಪ್ರತಿಕ್ರಿಯೆ ಸಿಕ್ಕಿತು. ಹತ್ತಿಪ್ಪತ್ತು ಮನೆಗಳಿಂದ ಜನ ಜೊತೆ ಸೇರಿದರು. ದಾರಿಯಲ್ಲಿ–

"ಏಯ್ ದೇವರುಗಳಿರಾ" ಎಂದು ಒಬ್ಬರು ಕೂಗಿದರೆ,

ಉಳಿದವರು "ಮುಂದೆ ಹೇಳಪಾ" ಎಂದು ಕೂಗುತ್ತಿದ್ದರು.

ಆಗ ಮೊದಲಿನವರು–

"ನಿಮ್ಮ ಸಹವಾಸ ಸಾಕು; ನಿಮ್ಮ ಕಾಟ ಸಾಕು" ಎಂದು ಕೂಗುತ್ತಿದ್ದರು.

ಉಳಿದವರು ಮತ್ತೆ "ಮುಂದೆ ಹೇಳಪಾ" ಎಂದು ಕೂಗಿದಾಗ,

ಮೊದಲಿನವರು–

"ಏಯ್ ದೇವರುಗಳಿರಾ" ಎಂದು ಪ್ರಾರಂಭಿಸುತ್ತಿದ್ದರು. ಇದು ಹೀಗೇ ಮುಂದುವರೆಯುತ್ತಿತ್ತು.

"ಮುಂದೆ ಹೇಳಪಾ"
"ನಿಮ್ಮಿಂದ ನಮಗೇನೂ ಪ್ರಯೋಜನ ಇಲ್ಲ"
"ಮುಂದೆ ಹೇಳಪಾ"
"ಏಯ್ ದೇವರುಗಳಿರಾ"
"ಮುಂದೆ ಹೇಳಪಾ"
"ನಮಗೆ ಬುದ್ಧನೇ ದೇವರು"
"ಮುಂದೆ ಹೇಳಪಾ"
"ಏಯ್ ದೇವರುಗಳಿರಾ"
"ಮುಂದೆ ಹೇಳಪಾ"
"ನಾವು ಇನ್ನು ಯಾರಿಗೂ ಹೆದರಲ್ಲ"
"ಮುಂದೆ ಹೇಳಪಾ"
"ಏಯ್ ದೇವರುಗಳಿರಾ"
"ಮುಂದೆ ಹೇಳಪಾ"
"ಬುದ್ಧ – ಅಂಬೇಡ್ಕರ್ ನಮ್ಗೆ ದಾರಿದೀಪ"
"ಏಯ್ ದೇವರುಗಳಿರಾ"
"ಮುಂದೆ ಹೇಳಪಾ"
"ನೀವಿನ್ನು ಮುಳುಗಿ ಹೋಗ್ರಿ"

ಹೌದ್ರಪಾ, ಹೌದ್ರಪಾ ಎಂದು ಜನ ಕೂಗಿದಾಗ, ಜಂಗುಳಿ ಕುಣಿದು ಕುಪ್ಪಳಿಸುತ್ತಾ ಕೇಕೆ ಹಾಕುತ್ತಿತ್ತು.

ಕೇಕೆ ಮುಗಿಯುತ್ತಲೇ ಯಾರಾದೊಬ್ಬರು "ಭಗವಾನ್ ಬುದ್ಧನಿಗೆ ಜಯವಾಗಲಿ; ಬಾಬಾಸಾಹೇಬ್ ಅಂಬೇಡ್ಕರ್‌ಗೆ ಜಯವಾಗಲಿ" ಎಂದು ಘೋಷಣೆ ಕೂಗುತ್ತಿದ್ದರು.

ಕೊನೆಗೆ ನದಿಯಲ್ಲಿ ಎಲ್ಲಾ ಮೂರ್ತಿ–ಚಿತ್ರಗಳನ್ನು ಎಸೆದು ಹಿಂತಿರುಗಿದರು; ಮಾರನೇ ದಿನ ಕೆಲವರು ಈ ಮೂರ್ತಿಗಳನ್ನು ಹುಡುಕಿ ತೆಗೆದು, ಮಾರಾಟ ಮಾಡಿಕೊಂಡರು ಎಂದು ಕೆಲದಿನಗಳ ಬಳಿಕ ಅವರಿವರು ಮಾತನಾಡಿಕೊಂಡರು.

ನಮ್ಮ ಸಂಬಂಧಿ ಪ್ರಭಾಕರನಿಗೆ ಧರ್ಮಾಂತರ ಒಪ್ಪಿಗೆಯಿರಲಿಲ್ಲ. ನಾವು ಹತ್ತಿಪ್ಪತ್ತು ಕುಟುಂಬಗಳು ಧರ್ಮಾಂತರಗೊಂಡರೂ ಆತನ ಕುಟುಂಬ ಧರ್ಮಾಂತರಗೊಳ್ಳಲಿಲ್ಲ. ಇಂದಿಗೂ ಅವರು ಹಿಂದೂ ಆಗಿ ಉಳಿದಿದ್ದಾರೆ.

*(ಮುಂದುವರಿಯುವುದು)*

## ಮುದ್ದಣ ಮನೋರಮೆಯರ ನಕ್ಸಲ್ ಸಲ್ಲಾಪ

■ ಗಿರಿಜಾಶಾಸ್ತ್ರಿ

ಒಳಗಿನವ ಹೊರಗಿನವ
ಹೊರಗಿನವ ಒಳಗಿನವ
ಒಳಹೊರಗೆಲ್ಲ ಕಲಸು ಮೇಲೋಗರ
ಕಲೆತು ಹೋಯಿತಲ್ಲ ಎಲ್ಲ
ಕ್ಷಮಿಸಿಬಿಡು ನಲ್ಲ
ಹರನ ಕೂಡ ಹಾದರವ ಮಾಡಿದವಳೇ
ಹೇಳಿಕೊಂಡಳಲ್ಲ ಇದೆಲ್ಲ
ನಾನವಳ ತಂಗಿಯಲ್ಲ....

ಭುಜದ ಮೇಲೆ ತಲೆಯಿಟ್ಟು
ಭೋರೆಂದು ಅತ್ತಳು
ಇವನ ಮೇಲೆ ಪ್ರೀತಿಯಿಲ್ಲವೆಂದಲ್ಲ
ಆ ಮೋಹದ ಕದ ಮುಚ್ಚಲಾರದಲ್ಲಾ...

ಬಲಿಷ್ಠ ಕೈಗಳು ನೇವರಿಸುತ್ತಿತ್ತು
ಅವಳ ಕೂದಲು
ಹನಿಸುತ್ತಿತ್ತು
ಹನಿ ಕಣ್ಣುಗಳು

ಪರಂಪರೆಯ ಕಾಳಿಂಗ ತೂಗುತ್ತಿತ್ತು
ಬೆನ್ನಹಿಂದೆ
ಮರ್ದನ ಮಾಡಿದ ಮೇಘ ಶ್ಯಾಮನ
ಹಂಬಲದಿಂದೆ
ಓಡೋಡಿದರು ಮುಂದೆ ಮಂದೆಯಲಿ
ಹಿಂಡು ಹಿಂಡೇ

'ಪಕ್ಕದ ಗಂಡನ ಮರೆ'ತು
'ತೊಟ್ಟಿಲಿನ ಹಸುಗೂಸ ತೊರೆದು'
'ತ್ವರೆ ತ್ವರೆ ತ್ವರೆ' ತ್ವರೆಮಾಡಿದರು

ಹೇಳು ಸಖಾ,
ಈ ಕಲಿಯುಗದಲ್ಲಿ
ನಾನೇನು ಮಾಡಲಿ
ಯಾವ ಗಿರಿಧರನಾಗರ
ಚೆನ್ನಮಲ್ಲಿಕಾರ್ಜುನರ
ಬೆನ್ನಹಿಂದೆ ಅಡಗಿಕೊಳ್ಳಲಿ

ನನ್ನ ಸಖೀ,
ನೀನು ಎಲ್ಲರಂತೆ ಕಳ್ಳಿಯಲ್ಲ ಕಣೇ
ಹೇಳಿಕೊಳ್ಳುವುದೇ ಕ್ರಾಂತಿಯಲ್ಲವೇನೇ
ಮುಂದುವರೆದರಂತೂ ಇನ್ನೂ ಆಸ್ಫೋಟ
ಸ್ಫೋಟಕ್ಕಾಗೇ ಕಾಯುವೆನೆ
ಹೆಣ್ಣೇ,
ನಿನ್ನ ಆತ್ಮ ಸಂಗಾತಿಯಲ್ಲವೇನೇ
ಕಲಿಯುಗದ ಗಂಡನಲ್ಲ
ನಿನ್ನ ಗುರು ಗೆಳೆಯನಲ್ಲಾ...

ಗಂಡನ ವೇಷದ
ಗೆಳೆಯನ ಎದೆಯ
ಒಳಗೆ ಹುದುಗಿ
ಅವಳು ನಗುತ್ತಾ ಅತ್ತಳು
ಅಳುತ್ತಾ ನಕ್ಕಳು.



# ಪರಿಸರ ಸಂರಕ್ಷಣೆ ಮತ್ತು ವಂಗಾರಿ ಮಥಾಯ್

■ಮ. ಶ್ರೀ ಮುರಳೀಕೃಷ್ಣ

ಇತ್ತೀಚಿನ ಕೆಲವು ದಶಕಗಳಲ್ಲಿ ಪರಿಸರ ಕುರಿತ ಅನೇಕ ವಿಷಯಗಳು ಚರ್ಚೆ, ವಿಚಾರ ವಿನಿಮಯಗಳಿಗೆ ಗ್ರಾಸವಾಗಿವೆ. ಲಾಗಾಯ್ತಿನಿಂದಲೂ ಮನುಷ್ಯನಿಗೂ ಪರಿಸರಕ್ಕೂ ಅವಿನಾಭಾವ ಸಂಬಂಧ. ಅವನು ಪರಿಸರದ ವೈಚಿತ್ರ್ಯಗಳಿಗೆ ತನ್ನದೇ ಆದ ಭಾಷ್ಯವನ್ನು ಬರೆದಿದ್ದಾನೆ. ಭಯ-ವಿಸ್ಮಯ-ಸಂತಸಗಳೊಂದಿಗೆ ಮಿಡಿದಿದ್ದಾನೆ. ನಾಗರೀಕತೆ ಬೆಳೆದಂತೆಲ್ಲ, ಪರಿಸರದ ಮೇಲೆ ಅವ್ಯಾಹತವಾಗಿ ಧಾಳಿಗಳು ಸಂಭವಿಸುತ್ತ ಬಂದಿವೆ. ಅಭಿವೃದ್ಧಿಯ ಕಲ್ಪನೆಗಳು ಸಾಕಾರಗೊಳ್ಳಬೇಕಾದರೆ ಪರಿಸರದ ನಾಶ ಆಗುವುದು ಖಂಡಿತ. ಆದರೆ ಅದನ್ನು ಕಡಿಮೆಗೊಳಿಸುವ, ಮಿತಿಗೆ ಒಳಪಡಿಸುವ ಅನಿವಾರ್ಯತೆ ವಿಶ್ವದ ಎಲ್ಲ ದೇಶಗಳೂ ಎದುರಿಸುತ್ತಿರುವ ಬಹುದೊಡ್ಡ ಸವಾಲುಗಳಲ್ಲಿ ಒಂದಾಗಿದೆ. ಅಭಿವೃದ್ಧಿ ಮೀಮಾಂಸೆಯಲ್ಲಿ ಪರಿಸರ ಕಾಳಜಿಯೂ ಒಂದು ಪ್ರಧಾನ ಪ್ರಶ್ನೆಯಾಗಿ ಒಳಗೊಳ್ಳುತ್ತಿರುವುದಕ್ಕೆ ನಾನಾ ಪರಿಸರ ಚಳವಳಿಗಳ ಅಮೂಲ್ಯ ಕೊಡುಗೆಗಳಿವೆ.

ಪರಿಸರ ಚಳವಳಿಗಳ ಮಧ್ಯಪ್ರವೇಶಿಸುವ ಪ್ರಯತ್ನದ ಗಾತ್ರ ವ್ಯಾಪ್ತಿ ದೊಡ್ಡವಾಗಿರಬೇಕು. ಪರಿಸರ, ಅದರ ಧ್ವಂಸ, ಸಂರಕ್ಷಣೆ, ಉತ್ಪಾದನಾ ವ್ಯವಸ್ಥೆಯ ರೂಪರೇಖೆಗಳು, ಉತ್ಪಾದಕತೆಯ ಸಾಮೂಹಿಕ ವಿತರಣೆಯ ಹಿಂದಿರುವ ಅಸಮಾನತೆ ಮುಂತಾದ ಹತ್ತು ಹಲವು ಆಯಾಮಗಳ ಬಗೆಗೆ ಅವು ಗಮನವನ್ನು ಕೇಂದ್ರೀಕರಿಸಬೇಕು. ಬಂಡವಾಳಶಾಹಿ ವ್ಯವಸ್ಥೆ ಬೆಳೆದಂತೆ ಪರಿಸರದ ನಾಶ ಅಧಿಕವಾಗುತ್ತ ಬಂದಿರುವುದನ್ನು ವಿಶೇಷವಾಗಿ ಗಮನಿಸಬೇಕು. ಅನೇಕ ಪರಿಸರ ಚಳವಳಿಗಳು ಪರಿಸರ ನಾಶದ ಹಿಂದಿರುವ ಈ ಕೆಲವು ಮೂಲಭೂತ ಕಾರಣಗಳನ್ನು ಶೋಧಿಸದೆ, ಮೇಲ್ಪದರದಲ್ಲಿ ಹೋರಾಟಗಳಿಗೆ ಮುಂದಾಗಿ ತಮ್ಮ ಸೀಮಿತವಾದ ಉದ್ದೇಶಗಳ ಈಡೇರಿಕೆಗಾಗಿ ಶ್ರಮಿಸುತ್ತಿವೆ. ಪರಿಸರ ಚಳವಳಿಗಳನ್ನು ಮೂರು ಬಗೆಯಾಗಿ ವರ್ಗೀಕರಿಸಬಹುದು.

ಅ) ಮೊದಲನೆಯದಾಗಿ ಒಂದು ಘಟನೆಯನ್ನು ಆಧಾರವಾಗಿಟ್ಟುಕೊಂಡು ಅದನ್ನು ವಿರೋಧಿಸುವ ಚಳವಳಿ ತನ್ನ ಧ್ಯೇಯೋದ್ದೇಶ ಈಡೇರಿದ ಬಳಿಕ ಸ್ತಬ್ಧವಾಗುತ್ತದೆ. ಹೆಚ್ಚಿನ ಸಂದರ್ಭಗಳಲ್ಲಿ ಇಲ್ಲೆಲ್ಲ ಸ್ವಂತ ಹಿತಾಸಕ್ತಿಗಳೇ ಕೆಲಸ ಮಾಡುತ್ತಿರುತ್ತವೆ.

ಆ) ಎರಡನೆಯದಾಗಿ, ಒಂದು ಭೌಗೋಳಿಕ ಪ್ರದೇಶದಲ್ಲಿ ಜರುಗುವ ಚಳವಳಿ. ಇಂಥ ಚಳವಳಿಯ ಉದ್ದೇಶ ಸೀಮಿತವಾಗಿರುತ್ತದೆ. ಯಾವುದೋ ಒಂದು ಬೃಹತ್ ಉದ್ದಿಮೆ ತಮ್ಮ ಪ್ರದೇಶದಲ್ಲಿ ನೆಲೆಗೊಳ್ಳಬಾರದು. ಇದರಿಂದ ಪರಿಸರ ಮಾಲಿನ್ಯ ತಲೆದೋರುತ್ತದೆ ಎಂಬ ನಿಲುವಿನೊಡನೆ ಹೋರಾಟ ಮಾಡುವ ಚಳವಳಿಗಳನ್ನು ಈ ವರ್ಗದಲ್ಲಿ ಸೇರಿಸಬಹುದು.

ಇ) ಮೂರನೆಯದಾಗಿ, ಒಟ್ಟು ಪರಿಸರವನ್ನೇ (ಅದರ ವಿಶಾಲಾರ್ಥದಲ್ಲಿ) ಕೇಂದ್ರ ಉದ್ದೇಶವಾಗಿಟ್ಟುಕೊಂಡು ಜನಾಂದೋಳನವನ್ನು ಹುಟ್ಟುಹಾಕಿ, ನಿರಂತರ ಹೋರಾಟಗಳಲ್ಲಿ ತೊಡಗುವ ಚಳವಳಿ.

ಮೇಲೆ ಪ್ರಸ್ತಾಪಿಸಿರುವ ಮೂರನೇ ವರ್ಗದ ಹೋರಾಟಗಾರರ ಸಂಖ್ಯೆ ಕಡಿಮೆ. ಇಂಥವರು ಸರ್ಕಾರ, ಅಧಿಕಾರಶಾಹಿ ಮತ್ತು ಉದ್ಯಮಪತಿಗಳ ಪ್ರಬಲ ವಿರೋಧವನ್ನು ಎದುರಿಸಬೇಕಾಗುತ್ತದೆ. ಅನೇಕ ಕಷ್ಟಕರ ಸನ್ನಿವೇಶಗಳೊಡನೆ ಸೆಣಸಾಡಬೇಕಾಗುತ್ತದೆ.

ಮಾನವನೇ ಪರಿಸರ ನಾಶವನ್ನು ಮಾಡುತ್ತ ಬಂದಿದ್ದಾನೆ; ಅದರ ಸಂರಕ್ಷಣೆಯನ್ನೂ ಮಾಡುತ್ತ ಬಂದಿದ್ದಾನೆ. ಇದೊಂದು ವಿರೋಧಾಭಾಸ, ಪರಿಸರದ ಬಗೆಗೆ ಕಾಳಜಿಯನ್ನು ವಹಿಸುವಂಥ ಅನೇಕ ವಿಧಿಗಳು, ಆಚರಣೆಗಳು, ಉತ್ಸವಗಳು ವಿಶ್ವಾದ್ಯಂತ ಜರುಗುತ್ತ ಬಂದಿರುವುದಕ್ಕೆ ಅನೇಕ ನಿದರ್ಶನಗಳಿವೆ. ನಮ್ಮ ನಾಡಿನಲ್ಲಿ ದೇವರ ಕಾಡುಗಳು, ನಾಗಬನಗಳು, ಅರಳಿಕಟ್ಟೆಯ ಕಲ್ಪನೆ, ಆದಿವಾಸಿ ಜೀವನಶೈಲಿ. ಮುಂತಾದವು ಪರಿಸರವನ್ನು ಸಂರಕ್ಷಿಸುವುದರಲ್ಲಿ ವಹಿಸಿರುವ ಪಾತ್ರ ಗಮನಾರ್ಹ. ಹಾಗೆಯೇ ಕೆಲವು ಸಮುದಾಯಗಳೂ ನಿರಂತರವಾಗಿ ಒಂದು ವ್ರತದಂತೆ ಈ ಪರಂಪರೆಯನ್ನು ಮುಂದುವರೆಸುತ್ತ ಬಂದಿವೆ. ಉದಾಹರಣೆಗಾಗಿ ನಮ್ಮ ರಾಷ್ಟ್ರದ ಬಿಷ್ಣೋಯ್ (Bishnoi) ಸಮುದಾಯವನ್ನು ಉಲ್ಲೇಖಿಸಬಹುದು.

15ನೇ ಶತಮಾನದ ಆದಿಯಿಂದ ಈ ಸಮುದಾಯದವರಿಗೆ ಪ್ರಾಣಿ ಮತ್ತು ಸಸ್ಯ ಸಂಕುಲದ ಸಂರಕ್ಷಣೆ ಒಂದು ಧರ್ಮವಾಗಿದೆ. ಈ ಸಮುದಾಯದ ಆಧ್ಯಾತ್ಮದ ಗುರು ಜಂಭೇಶ್ವರರು. 29 tenets ಗಳನ್ನು ಪ್ರತಿಪಾದಿಸಿದರು.

(Bis=twenty, ಮತ್ತು Noi=Nine) ಭಾರತದ ಪಶ್ಚಿಮಭಾಗದ (ಈಗಿನ ರಾಜಸ್ಥಾನದ) ಮರುಭೂಮಿ ಪ್ರದೇಶದ ಸುಮಾರು ಶೇ.90ರಷ್ಟು ರೈತರು ಈ tenet ಗಳನ್ನು ಸ್ವೀಕರಿಸಿ, ಒಂದು ಆರೋಗ್ಯಕರವಾದ ಪರಿಸರ ಸ್ನೇಹಿ ಸಾಮಾಜಿಕ ಬದುಕಿಗೆ ನಾಂದಿ ಹಾಡಿದರು. ಚಿಪ್ಕೋ ಚಳವಳಿಗೆ ಪ್ರೇರಕಶಕ್ತಿಯಾಗಿದ್ದ ಅಮೃತಾದೇವಿ ಮತ್ತು ಸುಮಾರು 360 ಮಂದಿ ಹುತಾತ್ಮರು ಬಿಷ್ಣೋಯ್ ಸಮುದಾಯಕ್ಕೆ ಸೇರಿದವ ರಾಗಿದ್ದರು. ಕೆಲವು ವರ್ಷಗಳ ಹಿಂದೆ ಬಾಲಿವುಡ್ ನಟ ಸಲ್ಮಾನ್‌ಖಾನ್ ಮತ್ತು ಮನ್ಸೂರ್‌ಅಲಿ ಖಾನ್ ಪಟೋಡಿ Black Buck ಎಂಬ ಜಿಂಕೆ ಜಾತಿಗೆ ಸೇರಿದ ಮೃಗಗಳನ್ನು ಕೊಂದದ್ದಕ್ಕೆ ಬಿಷ್ಣೋಯ್ ಸಮುದಾಯದ ಮಂದಿ ತೀವ್ರ ಪ್ರತಿಭಟನೆಗಳನ್ನು ಮಾಡಿದರು.

ಮಹಿಳೆಯರು ಪರಿಸರ ಸಂರಕ್ಷಣೆಯಲ್ಲಿ ತಮ್ಮ ಪಾತ್ರವನ್ನು ಹಲವು ರೀತಿಯಲ್ಲಿ ವಹಿಸುತ್ತ ಬಂದಿದ್ದಾರೆ. 1970ರ ದಶಕದಲ್ಲಿ ಹಿಮಾಲಯದ ಪ್ರದೇಶದಲ್ಲಿ ಸುಂದರಲಾಲ್ ಬಹುಗುಣ ನೇತೃತ್ವವಿದ್ದ ಚಿಪ್ಕೊ (chipko) ಚಳವಳಿಯಲ್ಲಿ ಅಧಿಕ ಸಂಖ್ಯೆಯಲ್ಲಿ ಮಹಿಳೆಯರು ಭಾಗವಹಿಸಿದ್ದರು. ಎಂಬತ್ತರ ದಶಕದಲ್ಲಿ ನಮ್ಮ ಕರಾವಳಿ ಕರ್ನಾಟಕದಲ್ಲಿ 'ಅಪ್ಪಿಕೊ' ಚಳವಳಿಯಲ್ಲಿ ಮಹಿಳೆಯರ ಭಾಗವಹಿಸುವಿಕೆಯಿತ್ತು. ಗಾಂಧೀವಾದಿ ಕುಸುಮ ಸೊರಬರಂಥವರು ಪರಿಸರ ಚಳವಳಿಗೆ ನೀಡಿದ ಕೊಡುಗೆಗಳು ಮಹತ್ತರವಾದವು. ಸಾಲುಮರದ ತಿಮ್ಮಕ್ಕಳ ಮರಗಳ ಬಗೆಗಿನ ಮಮತೆ ಅನೇಕರಿಗೆ ತಿಳಿದ ವಿಷಯವೇ ಆಗಿದೆ. ಶಿಕ್ಷಣವನ್ನು ಪಡೆಯದಿದ್ದರೂ native inteligence (ದೇಶೀಯ ಬುದ್ಧಿಶಕ್ತಿ) ಬಳಸಿ, ಪ್ರಜ್ಞಾಪೂರ್ವಕ ವಾಗಿ ಆಕೆ ಪರಿಸರವನ್ನು ಸಂರಕ್ಷಿಸಿರುವ ಪರಿ ಅನುಕರಣೀಯ ಮತ್ತು ಮನ್ನಣಾರ್ಹ ವಿಚಾರವೇ ಸರಿ.

ನಮ್ಮ ರಾಷ್ಟ್ರದ ಪರಿಸರವಾದಿಗಳ ವಲಯದಲ್ಲಿ ನರ್ಮದಾ ಬಚಾವ್ ಆಂದೋಳನದ ರೂವಾರಿಯಾಗಿ ಪ್ರೇರಕ ಶಕ್ತಿಯಾಗಿ, ಮೇಧಾ ಪಾಟ್ಕರ್ ಅವರು ಕಳೆದ ಇಪ್ಪತ್ತೈದು ವರ್ಷಗಳಿಂದ ಈ ಚಳವಳಿಯನ್ನು ಮುಂದುವರೆಸುತ್ತಿರುವುದು ಸಾಮಾನ್ಯ ಸಾಧನೆಯಲ್ಲ. ದೊಡ್ಡ ದೊಡ್ಡ ನೀರಾವರಿ/ಇತರ ಯೋಜನೆಗಳಿಂದ ನಿರ್ವಸತಿ ಹೊಂದುವ ಆದಿವಾಸಿಗಳ ಮತ್ತು ಸಮಾಜದ ಕೆಳಸ್ತರದ ಮಂದಿಯ ಹಕ್ಕುಗಳು, ಅವರ ಸ್ಥಳಾಂತರ, ಪುನರ್ವಸತಿ, ಭಾರಿ ಅಣೆಕಟ್ಟುಗಳ ವೆಚ್ಚ-ಲಾಭಗಳ (cost-benefit) ವಿಶ್ಲೇಷಣೆ, ಪರ್ಯಾವರಣ ರಕ್ಷಣೆ ಇವೇ ಮುಂತಾದ ಹತ್ತು ಹಲವು ಗಹನ ವಿಷಯಗಳನ್ನು ಮುನ್ನೆಲೆಗೆ ತಂದಿದ್ದು ಈ ಚಳವಳಿಯ ಹಿರಿಮೆ. ಅರುಂಧತಿರಾಯ್ ತಮ್ಮ ವಿಚಾರ ಪ್ರಚೋದಕ ಲೇಖನಗಳು ಮತ್ತು ಆ್ಯಕ್ಟಿವಿಸಂ ಮೂಲಕ ಪರಿಸರವಾದಕ್ಕೆ ಪೂರಕವಾಗಿ ದನಿ ಎತ್ತುತ್ತಿದ್ದಾರೆ. ವಂದನಾ ಶಿವ ಕುಲಾಂತರಿ ಬೀಜಗಳು, ಅವುಗಳ ಅವಾಂತರಗಳು ಕೃಷಿ ಕ್ಷೇತ್ರದ ಶ್ರೇಯಸ್ಸಿಗಾಗಿ ಪರ್ಯಾಯ ಯೋಜನೆಗಳು ಮುಂತಾದ ವಿಷಯಗಳಿಗೆ ಹೋರಾಡುತ್ತ ತಮ್ಮ ಛಾಪನ್ನು ಮೂಡಿಸಿದ್ದಾರೆ.

ಇದೇ ರೀತಿ, ಒಮ್ಮೆ ಕಗ್ಗತ್ತಲ ಖಂಡವೆಂದೇ ಕರೆಯಲ್ಪಡುತ್ತಿದ್ದ ಆಫ್ರಿಕಾದಲ್ಲಿ ಕೆನ್ಯಾದೇಶ ಮೂಲದ ಪ್ರೊ. ವಂಗಾರಿ ಮಥಾಯ್ (wangaari mathaai) ಕಳೆದ ಸುಮಾರು ಮೂವತ್ತೈದು ವರ್ಷಗಳಿಂದ ಅಲ್ಲಿನ ಪರಿಸರವನ್ನು ಉಳಿಸುವ ನಿಟ್ಟಿನಲ್ಲಿ ನಿರಂತರವಾಗಿ ಹೋರಾಡುತ್ತಿದ್ದಾರೆ. ಆಕೆ ಕೆನ್ಯಾ ದೇಶದ ನ್ಯೇರಿ ಜಿಲ್ಲೆಯ ಇಹಿಥೆ ಹಳ್ಳಿಯಲ್ಲಿ ಏಪ್ರಿಲ್ 1, 1940ರಂದು ಜನಿಸಿದರು. ಇವರ ಕುಟುಂಬ ಕೆನ್ಯಾದ ಅಧಿಕ ಸಂಖ್ಯೆಯಿದ್ದ ಕಿಕಿಯು (kikuyu) ಬುಡಕಟ್ಟು ಗುಂಪಿಗೆ (Ethnic group) ಸೇರಿತ್ತು. ಕಂಸಾಸ್‌ನ ಮೌಂಟ್ ಸೈಂಟ್ ಸ್ಕೋಲೆಸ್ಟಿಕಾ ಕಾಲೇಜಿನಿಂದ 1964ರಲ್ಲಿ ಜೀವಶಾಸ್ತ್ರ ವಿಷಯದಲ್ಲಿ ಪದವಿಯನ್ನು ಪಡೆದರು. 1966ರಲ್ಲಿ ಪಿಟ್ಸ್‌ಬರ್ಗ್‌ನ ವಿಶ್ವವಿದ್ಯಾಲಯದಿಂದ ವಿಜ್ಞಾನದ ವಿಷಯದಲ್ಲಿ ಮಾಸ್ಟರ್ಸ್ ಪದವಿಯನ್ನು ಗಳಿಸಿದರು. ಅನಂತರ ಜರ್ಮನಿ ಮತ್ತು ನೈರೋಬಿ ವಿಶ್ವವಿದ್ಯಾಲಯದಲ್ಲಿ ಡಾಕ್ಟರೇಟ್‌ಗಾಗಿ ಅಧ್ಯಯನ ಮುಂದುವರೆಸಿದರು. ಕೊನೆಗೆ 1971ರಲ್ಲಿ ನೈರೋಬಿ ವಿಶ್ವವಿದ್ಯಾಲಯ ಅವರಿಗೆ ಡಾಕ್ಟರೇಟ್ ಪದವಿಯನ್ನು ನೀಡಿತು. ಇಡೀ ಮಧ್ಯ ಮತ್ತು ಪೂರ್ವ ಆಫ್ರಿಕೆಯಲ್ಲಿ ಡಾಕ್ಟರೇಟ್ ಪದವಿಗಳಿಸಿದ ಪ್ರಥಮ ಮಹಿಳೆ ಎಂಬ ಹೆಗ್ಗಳಿಕೆ ಇವರದ್ದು. ಪ್ರಾಥಮಿಕ ವಿದ್ಯಾಭ್ಯಾಸದ ಅವಧಿಯಲ್ಲಿ ಆಕೆ ಕ್ರೈಸ್ತ (ಕ್ರಿಸ್ತ) ಧರ್ಮದ ಕೆಥೋಲಿಕ್ (catholic) ಪಂಥಕ್ಕೆ ಮತಾಂತರ ಹೊಂದಿದರು. ತಮ್ಮ ಹೆಸರನ್ನು ಮೇರಿ ಜೋಸಫೈನ್ (Mary Josephere) ಎಂದು ಬದಲಾಯಿಸಿಕೊಂಡರು. ಅಮೆರಿಕದ ಪಿಟ್ಸ್‌ಬರ್ಗ್ ವಿಶ್ವವಿದ್ಯಾನಿಲಯ ದಿಂದ ಹಿಂದಿರುಗಿದ ತರುವಾಯ ಅವರು ತಮ್ಮ ಕಿರಿಸ್ತಾನ (Christian) ಹೆಸರನ್ನು ಬಿಟ್ಟರು. Wangari Muta ಎಂಬ ತಮ್ಮ ಜನ್ಮನಾಮವನ್ನೇ ಬಳಸಲು ಶುರುಮಾಡಿದರು.

ನೈರೋಬಿಯ ವಿಶ್ವವಿದ್ಯಾನಿಲಯದಲ್ಲಿ ಉಪನ್ಯಾಸಕರಾಗಿ ಕೆಲಸ ಮಾಡುತ್ತಿದ್ದಾಗ ಅಲ್ಲಿನ ಶಿಕ್ಷಕರ ಒಳಿತಿನ ದೃಷ್ಟಿಯಿಂದ ಒಂದು ಸಂಘವನ್ನು ಸ್ಥಾಪಿಸಿದರು. ಹಲವು ಸವಲತ್ತುಗಳಿಗಾಗಿ ಹೋರಾಟ ಮಾಡಿದರು. ಈ ಹೋರಾಟಗಳ ಬಗೆಗೆ ಕೋರ್ಟುಗಳು ನಕಾರಾತ್ಮಕ ನಿಲುವನ್ನು ತಳೆದವು. ಆದರೆ ತರುವಾಯ ಸಮಾನ ಸವಲತ್ತುಗಳ ಬೇಡಿಕೆಗಳನ್ನು ಈಡೇರಿಸಲಾಯಿತು.

1976ರಲ್ಲಿ ಅವರು ಮಹಿಳೆಯರ ರಾಷ್ಟ್ರೀಯ ಮಂಡಲಿಯ ಅಧ್ಯಕ್ಷೆಯಾಗಿದ್ದಾಗ ದೊಡ್ಡ ರೀತಿಯಲ್ಲಿ ಮರಗಳನ್ನು ಬೆಳೆಸುವ ಯೋಜನೆಗೆ ಚಾಲನೆ ನೀಡಿದರು. ಇದು ತೃಣಮೂಲ ಮಟ್ಟದಲ್ಲಿ 'ಗ್ರೀನ್ ಬೆಲ್ಟ್' ಚಳವಳಿಯಾಗಿ ರೂಪುಗೊಂಡಿತು. ಅನೇಕ ಮಹಿಳೆಯರು ತಮ್ಮ ಹಿತ್ತಲಿನಲ್ಲಿ ಮತ್ತು ಚರ್ಚುಗಳಲ್ಲಿ ಮರಗಳನ್ನು ನೆಟ್ಟರು. ಕೆನ್ಯಾದಲ್ಲಿದ್ದ ನಿರ್‌ಅರಣ್ಯೀಕರಣ, (ಡೀ ಫಾರೆಸ್ಟೇಷನ್), ಭೂಸವೆತ ಮತ್ತು ಹೆಚ್ಚು





ಉಪ್ಪಿನಾಂಶವಿರದ ನೀರಿನ (fresh water) ಕೊರತೆ ಮುಂತಾದ ಸಮಸ್ಯೆಗಳನ್ನು ಎದುರಿಸುವ ದಿಶೆಯಲ್ಲಿ ಈ ಚಳವಳಿ ಜನ್ಮತಾಳಿತು.

ವಂಗಾರಿ ಮಥಾಯ್‌ರ ತಂದೆ ಕೃಷಿಯಲ್ಲಿ ತೊಡಗಿದ್ದರು. 1969ರ ಮೇ ಮಾಸದಲ್ಲಿ ಅವರು ಮವಾಂಗಿ ಮಥಾಯ್ (Mwargi mathai) ರನ್ನು ವಿವಾಹವಾದರು. ಮೂರು ಮಕ್ಕಳುಗಳಾದವು. 1979ರಲ್ಲಿ ಆಕೆಯ ಗಂಡ ವಿವಾಹ ವಿಚ್ಛೇದನಕ್ಕೆ ಮುಂದಾದರು. ಒಬ್ಬ ಮಹಿಳೆಯಾಗಿ ದೃಢಚಿತ್ತವಿರುವುದರಿಂದ ತನ್ನಿಂದ ಆಕೆಯನ್ನು ನಿಯಂತ್ರಿಸಲು ಸಾಧ್ಯವಾಗುತ್ತಿಲ್ಲ ಮತ್ತು ಆಕೆಗೆ ಸಂಸತ್ ಸದಸ್ಯರೊಬ್ಬರ ಜೊತೆ ಅನೈತಿಕ ಸಂಬಂಧವಿದೆಯೆಂದು ಸಾರ್ವಜನಿಕವಾಗಿ ಸಾರಿ, ಕೇಸನ್ನು ದಾಖಲಿಸಿದರು. ಕೋರ್ಟಿನ ತೀರ್ಪು ಗಂಡನ ಪರವಾಯಿತು. ಅನಂತರ, ಪತ್ರಿಕೆಯೊಂದಕ್ಕೆ ಸಂದರ್ಶನ ನೀಡುವಾಗ, ನ್ಯಾಯಾಧೀಶರು ಭ್ರಷ್ಟರು ಅಥವಾ ಅಸಮರ್ಥರೆಂದು ವಂಗಾರಿ ಮಥಾಯ್ ಅಭಿಪ್ರಾಯಪಟ್ಟರು. ಕೋಪಗೊಂಡ ನ್ಯಾಯಾಧೀಶರು ಆರು ತಿಂಗಳು ಜೈಲುವಾಸದ ಶಿಕ್ಷೆಯನ್ನು ನೀಡಿದರು. ಮೂರು ದಿನಗಳ ಜೈಲುವಾಸದ ತರುವಾಯ ವಕೀಲ ಒಂದು ಹೇಳಿಕೆಯನ್ನು ತಯಾರಿಸಿ ಕೋರ್ಟಿನ ಮುಂದಿರಿಸಿದರು. ಅದನ್ನು ಒಪ್ಪಿಕೊಂಡ ಕೋರ್ಟು ಆಕೆಯನ್ನು ಬಂಧಮುಕ್ತಗೊಳಿಸಿತು. ವಿಚ್ಛೇದನದ ನಂತರ ಆಕೆಯ ಮಾಜಿಗಂಡ ಲಾಯರ್ ಮೂಲಕ ಪತ್ರ ಕಳುಹಿಸಿ ವಂಗಾರಿ ತಮ್ಮ ಹೆಸರಿನ ಮುಂದೆ ಮಥಾಯ್ ಎಂಬ ತನ್ನ ಹೆಸರನ್ನು ಸೇರಿಸಿಕೊಳ್ಳಬಾರದೆಂದು ತಿಳಿಸಿದರು. ಮಥಾಯ್ ತಿರುಗಿಬಿದ್ದು ತನ್ನ ಹೆಸರಿಗೆ ಮತ್ತೊಂದು "a" (Mathai) ಸೇರಿಸಿದರು! ಕೋರ್ಟಿನ ತಗಾದೆಯಿಂದ ಅವರಿಗೆ ಹಣದ ಮುಗ್ಗಟ್ಟು ಎದುರಾಯಿತು. ವಿಶ್ವವಿದ್ಯಾಲಯದ ಸಂಬಳ ಸಾಕಾಗುತ್ತಿರಲಿಲ್ಲ. ಆದುದರಿಂದ ಅವರು ಆಫ್ರಿಕಾ ಆರ್ಥಿಕ ಆಯೋಗದಲ್ಲೂ ಕೆಲಸ ಮಾಡಲು ತೊಡಗಿದರು.

ಗ್ರೀನ್‌ಬೆಲ್ಟ್ ಆಂದೋಳನದಲ್ಲಿ ಅಸಂಖ್ಯಾತ ಮಹಿಳೆಯರು ತಮ್ಮಿಂದಾಗುವ ಚಟುವಟಿಕೆಗಳಲ್ಲಿ ತೊಡಗಿದ್ದಾರೆ. ಮೊದಲಿನಿಂದಲೂ ವಂಗಾರಿ ಮಥಾಯ್ ಅವರಿಗೆ ಕೆನ್ಯಾದ ಗ್ರಾಮೀಣ ಪ್ರದೇಶದ ಮಹಿಳೆಯರ ಮೇಲೆ ಅಪಾರ ನಂಬಿಕೆ. ಈ ಚಳವಳಿಯ ಯಶಸ್ಸಿನ ಹಿಂದೆ ಅವರ ಪಾತ್ರ ಹಿರಿದಾದದ್ದು ಎಂಬುದು ಅವರ ಅಂಬೋಣ. "ಬೀಜಗಳು/ಸಸಿಗಳನ್ನು ನೆಟ್ಟು, ಮರಗಳನ್ನು ಬೆಳೆಸುವುದರ ಪ್ರಕ್ರಿಯೆಗಳು ಮಹಿಳೆಯರ ಮುಂದೆ ನೈಜ ಆಯ್ಕೆಗಳನ್ನು ಅನಾವರಣಗೊಳಿಸುತ್ತವೆ. ಅವು ಅವರು ಪರ್ಯಾವರಣವನ್ನು ರಕ್ಷಿಸುವವರೋ ಅಥವಾ ನಾಶ ಮಾಡುವವರೋ ಎಂಬುದನ್ನು ಸೂಚಿಸುತ್ತವೆ. ಮರಗಳ ಬೆಳಸುವಿಕೆ ಮಹಿಳೆಯರಿಗೆ ಶಿಕ್ಷಣವನ್ನು ನೀಡುತ್ತದೆ. ಮರಗಳ/ಅಡವಿಗಳ ಉಳಿವಿಗಾಗಿ ನಡೆಯುವ ಹೋರಾಟಗಳಿಗೆ ಒಂದು ವಿಸ್ತೃತವಾದ ಧ್ಯೇಯೋದ್ದೇಶವಿರುತ್ತದೆ. ಅದೆಂದರೆ ಪ್ರಜಾಪ್ರಭುತ್ವ, ಕಾನೂನುಗಳ ಅನುಸರಣೆ, ಮಾನವ ಹಕ್ಕುಗಳು ಮತ್ತು ಮಹಿಳೆಯರ ಹಕ್ಕುಗಳನ್ನು ಮಾನ್ಯತೆ ಮಾಡುವ ಸಮಾಜದ ನಿರ್ಮಾಣ. ಅಲ್ಲದೆ ಮಹಿಳೆಯರು ವೃಕ್ಷ ಸಂರಕ್ಷಣಾಸ್ಥಾನ (Nurseries)ಗಳ ನಿರ್ವಹಣೆ, ಮಳೆಕೊಯ್ಲು ಮತ್ತು ಸುಭದ್ರತೆಯ ಸಾಮುದಾಯಿಕ ಯೋಜನೆಗಳ ವ್ಯವಸ್ಥೆ ಮತ್ತು ಜಾರಿ ಇವುಗಳಿಂದ ಸಮರ್ಥ ನಾಯಕತ್ವವನ್ನು ನೀಡುತ್ತಿದ್ದಾರೆ. ಈ ಚಟುವಟಿಕೆಗಳ ಅನುಭವಗಳು ಅವರಲ್ಲಿ ಹೆಚ್ಚಿನ ಭರವಸೆಯನ್ನು ಮೂಡಿಸಿವೆ. ಅವರನ್ನು ಸಬಲರನ್ನಾಗಿ ಮಾಡಿವೆ. ಹಾಗೂ ಅವರ ಜೀವನಕ್ಕೆ ಸ್ಪಷ್ಟವಾದ ದಿಕ್ಕನ್ನು ತೋರಿಸಿವೆ." ಎಂದು ಅವರು ಹೇಳುತ್ತಾರೆ.

ಗ್ರೀನ್ ಬೆಲ್ಟ್ ಆಂದೋಳನದ ಮುಖ್ಯಾಂಶವೆಂದರೆ ಬಡ ಮಹಿಳೆಯರ ಸಂಘಟನೆ. ಇದರ ಮೂಲಕವೇ ಅವರು ಆಫ್ರಿಕಾದ ಮರುಭೂಮೀಕರಣವನ್ನು ತಡೆಯುವ ನಿಟ್ಟಿನಲ್ಲಿ ಆ ಖಂಡದಾದ್ಯಂತ ಸುಮಾರು 30 ಮಿಲಿಯ ಮರಗಳನ್ನು ನೆಡುವುದರಲ್ಲಿ ಸಫಲರಾಗಿದ್ದಾರೆ. ವಂಗಾರಿ ಮಥಾಯ್ ರಾಜಕೀಯದಲ್ಲೂ ಯಶಸ್ವಿಯಾಗಿದ್ದಾರೆ.

1979ರಲ್ಲಿ ವಂಗಾರಿ ಮಥಾಯ್ ಕೆನ್ಯಾದ ನ್ಯಾಷನಲ್ ಕೌನ್ಸಿಲ್ ಆಫ್ ವಿಮೆನ್‌ನ ಅಧ್ಯಕ್ಷ ಸ್ಥಾನಕ್ಕೆ ಸ್ಪರ್ಧಿಸಿದರು. ಕೆನ್ಯಾ ದೇಶದ ಆಗಿನ ಅಧ್ಯಕ್ಷರಾಗಿದ್ದ ಡೇನಿಯಲ್ ಮ್ಯೊ (Daviel moi) ಅವರು ಕಿಕಿಯೂ (Kikiyu) ಬುಡಕಟ್ಟಿನ ಪ್ರಭಾವವನ್ನು ಕಡಿಮೆಗೊಳಿಸಲು ಸನ್ನದ್ಧರಾದರು. ಅದರ ಪರಿಣಾಮವೋ ಏನೋ, ವಂಗಾರಿ ಮಥಾಯ್ ಮೂರು ಮತಗಳಿಂದ ಸೋತರು. ಅನಂತರ ಅವರು ಯಶಸ್ವಿಯಾದರು. ಆದರೆ ಅವರಿಗೆ ಸರ್ಕಾರದಿಂದ ಅನೇಕ ಕಿರುಕುಳ ನೀಡಲಾಯಿತು. ಎದೆಗುಂದದ ವಂಗಾರಿ ಮಥಾಯ್ 1987ರವರೆಗೆ ಅಧ್ಯಕ್ಷೆಯಾಗಿ ಸೇವೆ ಸಲ್ಲಿಸಿದರು.

1982ರಲ್ಲಿ ವಂಗಾರಿ ಮಥಾಯ್ ನ್ಯೇರಿಯ (Nyeri) ಸಂಸತ್ ಸ್ಥಾನಕ್ಕೆ ಸ್ಪರ್ಧಿಸಿದರು. ಅದಕ್ಕಾಗಿ ವಿಶ್ವವಿದ್ಯಾಲಯದ ಸ್ಥಾನಕ್ಕೆ ರಾಜೀನಾಮೆ ನೀಡಿದರು. ಆದರೆ ಕೆಲವು ತಾಂತ್ರಿಕ ಕಾರಣಗಳನ್ನು ನೀಡಿ, ಆಕೆ ಚುನಾವಣೆಯಲ್ಲಿ ಸ್ಪರ್ಧಿಸಲು ಅನರ್ಹಳೆಂದು ನ್ಯಾಯಾಲಯಗಳು ತೀರ್ಮಾನಿಸಿದವು. ಇದರ ಹಿಂದೆ ಕೆನ್ಯಾ ರಾಷ್ಟ್ರಾಧ್ಯಕ್ಷ ಡೇನಿಯಲ್ ಮ್ಯೊನ ಕೈವಾಡವಿತ್ತೆಂದು ವಂಗಾರಿಗೆ ನಂತರ ತಿಳಿಯಿತು. ಏಕೆಂದರೆ ಆಕೆ ವಿಶ್ವವಿದ್ಯಾಲಯದ ತನ್ನ ಹುದ್ದೆ ವಾಪಸ್ಸು ನೀಡಬೇಕೆಂದು ಮನವಿ ಮಾಡಿದಾಗ, ಅದನ್ನು ನಿರಾಕರಿಸಲಾಯಿತು. ಆ ವಿಶ್ವವಿದ್ಯಾಲಯದ ಕುಲಪತಿಯಾಗಿದ್ದವರು ಸ್ವತಃ ಡೇನಿಯಲ್ ಮ್ಯೊ! ಈ ಬೆಳವಣಿಗೆಯಿಂದ ಆಕೆ ವಿಶ್ವವಿದ್ಯಾಲಯ ನೀಡಿದ್ದ ಮನೆಯಿಂದ ಉಚ್ಚಾಟಿಸಲ್ಪಟ್ಟರು.

ವಂಗಾರಿ ಗ್ರೀನ್ ಬೆಲ್ಟ್ ಆಂದೋಳನದ ಮೂಲಕ ಬರೀ ಪರ್ಯಾವರಣಕ್ಕೆ ಮಾತ್ರ ಚಟುವಟಿಕೆಗಳನ್ನು ಸೀಮಿತಗೊಳಿಸದೆ, ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಬಲಪಡಿಸುವ ದಿಶೆಯಲ್ಲಿ ಕೆಲವು ಇತ್ಯಾತ್ಮಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡರು. ಮತದಾರರ ನೋಂದಾಯಿಸುವಿಕೆ, ಸಾಂವಿಧಾನಿಕ ಸುಧಾರಣೆಗಳ ಜಾರಿಗೆ ಒತ್ತಾಯ, ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಪ್ರಾಮುಖ್ಯ ಇತ್ಯಾದಿ ವಿಷಯಗಳ ಅನುಷ್ಠಾನಕ್ಕಾಗಿ ಹೋರಾಟಗಳನ್ನು ನಡೆಸಲಾಯಿತು. ಇವೆಲ್ಲ ಆಡಳಿತಾರೂಢ ಪಕ್ಷದ ಕೆಂಗಣ್ಣಿಗೆ ಗುರಿಯಾಯಿತು. ಈ ಡೆಮಾಕ್ರಸಿ ಪರ ಆಂದೋಳನವನ್ನು ಹತ್ತಿಕ್ಕುವ ದಿಶೆಯಲ್ಲಿ ವ್ಯವಸ್ಥೆ ಕಾರ್ಯಪ್ರವೃತ್ತವಾಯಿತು.

ಅಕ್ಟೋಬರ್ 1989ರಲ್ಲಿ ಸರ್ಕಾರ 60 ಮಹಡಿಗಳ ಒಂದು ದೊಡ್ಡ ಸಂಕೀರ್ಣವನ್ನು ರಾಜಧಾನಿಯಲ್ಲಿ ಕಟ್ಟಲು ನಿಶ್ಚಯಿಸಿತು. ಇತರ ಕಟ್ಟಡಗಳ ಜೊತೆ ಅಧ್ಯಕ್ಷ ಡೇನಿಯಲ್ ಮ್ಯೊನ ಪ್ರತಿಮೆಯನ್ನು ಸ್ಥಾಪಿಸುವ ಉದ್ದೇಶವನ್ನು ಸರ್ಕಾರ ಹೊಂದಿತ್ತು. ಚಾಲ್ತಿಯಲ್ಲಿದ್ದ ಹಲವು ಕಾನೂನುಗಳು ಮತ್ತು ನಿಬಂಧನೆಗಳನ್ನು ಗಾಳಿಗೆ ತೂರಲಾಗುತ್ತದೆ ಎಂಬ ಸುಳಿವು ವಂಗಾರಿಯವರಿಗೆ ಸಿಕ್ಕಿತು. ಪರಿಸರ ಸಂರಕ್ಷಣೆಯ ದೃಷ್ಟಿಯಿಂದಲೂ ಈ ಯೋಜನೆ ಮಾರಕವಾದದ್ದು ಎಂದು ವಂಗಾರಿ ಪ್ರತಿಪಾದಿಸಿದರು. ಸರ್ಕಾರ ಇದನ್ನು ಅಲಕ್ಷಿಸಿತು. ಆದುದರಿಂದ ಆಕೆ ವಿಶ್ವಸಂಸ್ಥೆಯ ಕೆಲವು ಅಂಗಸಂಸ್ಥೆಗಳ ಗಮನವನ್ನು ಸೆಳೆಯಬೇಕಾಯಿತು. ಈ ವಿಷಯ ಅಂತರರಾಷ್ಟ್ರೀಕರಣಗೊಂಡದ್ದಕ್ಕೆ ಸಿಡಿಮಿಡಿಗೊಂಡ ಆ

ಅಧ್ಯಕ್ಷರು ವಂಗಾರಿಯನ್ನು 'crazy woman,' 'ಹುಚ್ಚಿ' 'ಚಳವಳಿಯ ಕಾರ್ಯಕರ್ತರಿಗೆ ತಲೆಗಳಲ್ಲಿ ಹುಳುಗಳಿವೆ' 'ಆಂದೋಳನದ ಮಹಿಳಾ ಕಾರ್ಯಕರ್ತರದ್ದು ವಿವಾಹ ವಿಚ್ಛೇದಿತರ ಒಂದು ಗುಂಪು' ಎಂದು ಜರೆದ!! ಕೊನೆಗೆ ಈ ಯೋಜನೆ ಸ್ತಬ್ಧಗೊಂಡಿತು. ಚಳವಳಿಗಾರರ ಅವಿರತ ಹೋರಾಟಕ್ಕೆ ಜಯ ಲಭಿಸಿತು.

ಆದರೆ ಸರ್ಕಾರ ಸುಮ್ಮನೆ ಇರಲಿಲ್ಲ. ಪ್ರಜಾಪ್ರಭುತ್ವವಾದಿ ಕಾರ್ಯಕರ್ತರ ಒಂದು ಪಟ್ಟಿ ತಯಾರು ಮಾಡಿ, ಅವರನ್ನು ಹತ್ಯೆ ಮಾಡಲು ಕುಟಿಲ ಯೋಜನೆಗಳನ್ನು ರೂಪಿಸಿತು. ವಂಗಾರಿಯ ಹೆಸರು ಆ ಪಟ್ಟಿಯಲ್ಲಿ ಮೊದಲ ಸ್ಥಾನವನ್ನು ಪಡೆದಿತ್ತು! ಪುನಃ ವಂಗಾರಿಯನ್ನು ದಸ್ತಗಿರಿ ಮಾಡಲಾಯಿತು. ಆದರೆ ಪ್ರಜಾಪ್ರಭುತ್ವದ ಪರವಾಗಿದ್ದ "ಫೋರಂ ಫಾರ್ ರೆಸ್ಟೊರೇಷನ್ ಆಫ್ ಡೆಮೋಕ್ರಸಿ'ಗೆ ಇದರ ಸುಳಿವು ಸಿಕ್ಕಿತು. ಮಾಧ್ಯಮಗಳಿಗೆ ಮಾಹಿತಿಗಳನ್ನು ನೀಡಿತು. ಅಂತರರಾಷ್ಟ್ರೀಯ ಮಟ್ಟದ ಒತ್ತಡದಿಂದ ವಂಗಾರಿ ಅವರನ್ನು ಸರ್ಕಾರ ಬಿಡುಗಡೆ ಮಾಡಬೇಕಾಯಿತು. ವಂಗಾರಿ ಸಂಸತ್ ಸದಸ್ಯೆಯಾಗಿ ಚುನಾಯಿತರಾಗುವ ಸಂದರ್ಭದಲ್ಲೂ ಅನೇಕ ವಿಧದ ಅಡ್ಡಿ ಆತಂಕಗಳನ್ನು ಎದುರಿಸಬೇಕಾಯಿತು.

ವಂಗಾರಿ ಕೆನ್ಯಾದ ಸಂಸತ್‌ಗೆ ಚುನಾಯಿತರಾಗಿ, ಜನವರಿ 2003ರಿಂದ ನವೆಂಬರ್ 2005ರ ವರೆಗೆ ಪರ್ಯಾವರಣ ಮತ್ತು ನೈಸರ್ಗಿಕ ಸಂಪನ್ಮೂಲಗಳ ಸಚಿವೆಯಾಗಿ ಕಾರ್ಯನಿರ್ವಹಿಸಿದ್ದಾರೆ. ಇವೆಲ್ಲಾ ಕಾರ್ಯಗಳಿಗಾಗಿ ಅವರಿಗೆ 2004ರಲ್ಲಿ ನೊಬೆಲ್ ಶಾಂತಿ ಪ್ರಶಸ್ತಿ ದೊರಕಿತು. ಇವರು ಈ ಪುರಸ್ಕಾರಕ್ಕೆ ಭಾಜನರಾಗಿರುವ ಆಫ್ರಿಕಾದ ಪ್ರಥಮ ಮಹಿಳೆ. ರೈಟ್‌ಲೈವ್‌ಲಿಹುಡ್ ಪ್ರಶಸ್ತಿಯನ್ನು ಒಳಗೊಂಡು ಸುಮಾರು 21 ಅಂತರರಾಷ್ಟ್ರೀಯ ಮಟ್ಟದ ಪ್ರಶಸ್ತಿಗಳಿಗೆ ಭಾಜನರಾಗಿದ್ದಾರೆ. ಈ ದಶಕದಲ್ಲಿ ಪ್ರಪಂಚದಾದ್ಯಂತ ಒಂದು ಬಿಲಿಯನ್ ಮರಗಳನ್ನು ನೆಡುವುದು ಅವರ ಮುಂದಿನ ಗುರಿ.

"ಒಂದು ಆರೋಗ್ಯಪೂರ್ಣ ನೈಸರ್ಗಿಕ ವಿಶ್ವವೇ ಶಾಂತಿಯುಕ್ತ ಮತ್ತು ನ್ಯಾಯಸಮ್ಮತ ಸಮಾಜವೊಂದರ ಹೃದಯ" ಎಂಬುದು ಅವರ ದೃಢ ನಿಲುವು.

ಫ್ರೆಡರಿಕ್ ಏಂಗೆಲ್ಸ್ ಮಾನವ ಮತ್ತು ಪರಿಸರದ ಸಂಬಂಧಗಳನ್ನು ವ್ಯಾಖ್ಯಾನಿಸುತ್ತ "ಪ್ರಕೃತಿಯ ವಿರುದ್ಧ ನಡೆಸುವ ಪ್ರತಿಯೊಂದು ಹೋರಾಟದಲ್ಲಿಯೂ ಮನುಷ್ಯನಿಗೆ ಊಹಿಸಿದಂತೆ ಮೊದಲ ಹಂತದಲ್ಲಿ ಜಯ ಲಭಿಸುತ್ತದೆ. ಆದರೆ ಎರಡನೆಯ ಮತ್ತು ಮೂರನೆಯ ಹಂತದಲ್ಲಿ ಲಭಿಸಿದ್ದ ಗೆಲುವು ಸಹ ನಿಷ್ಪ್ರಯೋಜಕವಾಗುತ್ತದೆ" ಎಂದಿದ್ದಾರೆ. ಬಂಡವಾಳಶಾಹಿ ಉತ್ಪಾದನಾ ವ್ಯವಸ್ಥೆಯು ಉತ್ಪಾದನಾ ವಿಧಾನ ಹಾಗೂ ಸಂಬಂಧಗಳಲ್ಲಿ ತಂದಿರುವ ಬದಲಾವಣೆಗಳು ಪ್ರಕೃತಿಯ ನಿಯಮದ ವಿರುದ್ಧ ನಡೆಯುತ್ತಿರುವ ಪ್ರಕ್ರಿಯೆಗಳು ಎಂಬುದು ಏಂಗೆಲ್ಸ್‌ರ ನಿಲುವು. ಈ ಮನನಯೋಗ್ಯ ಗ್ರಹಿಕೆಯ ಹಿನ್ನೆಲೆಯಲ್ಲಿ ಸಮಸಮಾಜದ ನಿರ್ಮಾಣದಲ್ಲಿ ಪರಿಸರ ಸಂರಕ್ಷಣೆಯ ಪಾತ್ರದ ಬಗೆಗೆ ಕ್ರಿಯಾಶಾಲಿಯಾಗಿ ಸ್ಪಂದಿಸುತ್ತಿರುವ ವಂಗಾರಿ ಮಥಾಯ್‌ರ ಜೀವನ ಮತ್ತು ಸಾಧನೆಗಳು ನಮಗೆಲ್ಲರಿಗೂ ಸ್ಫೂರ್ತಿದಾಯಕ ಮತ್ತು ದಿಕ್ಸೂಚಕ. ■

*ಆಕರ : 1) 'ದಿ ಹಿಂದೂ' ಪತ್ರಿಕೆಯ 21/3/2010 ಸಂಚಿಕೆಯಲ್ಲಿ ಪ್ರಕಟವಾದ 'ಪ್ಲಾಂಟಿಂಗ್ ಐಡಿಯಾಸ್' ಎಂಬ ಲೇಖನದ ಕೆಲವು ಅಂಶಗಳು.*
*2) ಡಾ. ಕೆ. ಮೋಹನ್‌ಕೃಷ್ಣ ರೈ ವಿರಚಿತ 'ಪರಿಸರ ಚಳವಳಿಗಳು' ಕೃತಿಯಿಂದ ಕೆಲವು ಅಂಶಗಳು.*


**Form IV (See Rule 8)**

Statement about ownership and other particular about News Paper

**"Namma Manasa"**

As required to be published under section 19 of the press and Registration Book act read with the Rule 10 of the Press and Registration of News Papers(Central) 1956.

| | | | |
|---|---|---|---|
| 1) | Name of the Publication | : | Namma Manasa |
| 2) | Place of the Publication | : | Bangalore, Karnataka |
| 3) | Periodicity of Publication | : | Monthly |
| 4) | Language | : | Kannada |
| 5) | Name of the Editor | : | H.S. Rajeshwari |
| | Address | : | 114/5, 9th Cross, 2nd Main, Chamarajpet, Bangalore-18 |
| | Nationality | : | Indian |
| 6) | Name of the Publisher & owner | : | H.S. Rajeshwari |
| | Address | : | 114/5, 9th Cross, 2nd Main, Chamarajpet, Bangalore-18 |
| | Nationality | : | Indian |
| 7) | Name of the Printer | : | ILA Mudrana |
| | Address | : | No. 36, 40 Ft. Road, Raghavanagar<br>New Timberyard Layout, Bangalore - 560 026 |
| | Nationality | : | Indian |
| 8) | Registration No. | : | KARKAN/2007/22289 |

I, H.S. Rajeshwari here by declare that the particulars given above are true to the best of my knowledge and belief.

Sd/-
**H.S. Rajeshwari**
Publisher



ಸೆಲ್ಫ್ ಪೋರ್ಟ್ರೈಟ್ – ಕ್ಯಾಥೆ ಕೋಲ್‌ವಿಜ್

# ಕಲಾಮಾಧ್ಯಮದಲ್ಲಿ ಸ್ತ್ರೀವಾದಿ ಚಳವಳಿ : ಸಂಕ್ಷಿಪ್ತ ನೋಟ

■ ಡಾ. ಚರಿತಾ

ತನ್ನ ವಿಶಿಷ್ಟ–ವಿಸ್ಮಯಕರ ಶಾರೀರಿಕ ಗುಣಲಕ್ಷಣ ಮತ್ತು ಸೂಕ್ಷ್ಮ ಮನಸ್ಸು ಹೆಣ್ಣಿನ ಅಗಾಧ ಚೈತನ್ಯಕ್ಕೆ ಕಾರಣವಾದಂತೆಯೇ ದಮನಕ್ಕೆ ಒಳಗಾಗಲೂ ಕಾರಣವಾದುದು ವಿಪರ್ಯಾಸ. ಅಭಿವ್ಯಕ್ತಿ ಸ್ವಾತಂತ್ರ್ಯದಿಂದ ವಂಚಿತವಾಗಿರುವ ಶೋಷಿತವರ್ಗದಲ್ಲಿ ಮಹಿಳೆಗೆ ಅಗ್ರಸ್ಥಾನ. ಇಲ್ಲಿ ಜಾತಿ, ವರ್ಗ, ದೇಶ–ಕಾಲ ಎಲ್ಲವನ್ನೂ ಮೀರಿದ ಏಕತೆಯಿದೆ!

ಸ್ವಭಾವತಃ ಮಾನಸಿಕ ಮತ್ತು ದೈಹಿಕ ಸಂವೇದನೆಗಳಿಗೆ ಸೂಕ್ಷ್ಮವಾಗಿ ಸ್ಪಂದಿಸುವ ಮಹಿಳೆ ಇಂದು ತನ್ನ ಭಾವಾಭಿವ್ಯಕ್ತಿಗಾಗಿ ಹಲವು ಸೃಜನಶೀಲಮಾಧ್ಯಮಗಳ ಮೊರೆಹೋಗಿದ್ದಾಳೆ. ದೃಶ್ಯರೂಪದ

*ಬದಲಾವಣೆಯ ಬಗ್ಗೆ ನಡೆಯುತ್ತಿದ್ದ ಒಂದು ಚಿಂತನಾ ಸಭೆಗೆ ಆಗಮಿಸಿದ್ದ ಒಂದು ಸಂದರ್ಭದಲ್ಲಿ ಡಾ. ರಾಮಮನೋಹರ ಲೋಹಿಯಾ ಅವರು ಹೇಳಿದ ಮಾತು ನೆನಪಾಗುತ್ತಿದೆ. "ಈ ಸಭೆಯಲ್ಲಿ ಒಬ್ಬ ಹರಿಜನರಿಲ್ಲ, ಒಬ್ಬ ಮಹಿಳೆ ಇಲ್ಲ. ಏನು ಚಿಂತನೆ ನಡೆಸುತ್ತೀರಿ?" ಈ ಮಾತು ಲೋಕಸಭೆ ಮತ್ತು ರಾಜ್ಯದ ವಿಧಾನಸಭೆಗಳಲ್ಲಿ ಕುಳಿತಿರುವ ಪುರುಷರನ್ನೇ ಕುರಿತು ಹೇಳಿದಂತಿದೆ.*

*–ಜಯಪ್ರಕಾಶ ಮಾವಿನಕುಳಿ (ಅದೇ ಪು.16)*

ಅಸ್ತಿತ್ವದಿಂದಲೇ ಬಂಧಿತಳಾಗಿರುವ ಹೆಣ್ಣು, ದೃಶ್ಯಕಲಾ ಮಾಧ್ಯಮದಲ್ಲಿ ಸ್ತ್ರೀಸಂವೇದನೆಯ ಸೂಕ್ಷ್ಮಜ್ಞರಿಂದ ಚಿತ್ರಿಸಲ್ಪಟ್ಟಿರುವ ರೀತಿಯ ಕುರಿತಂತೆ ಈ ಲೇಖನವು ಸಂಕ್ಷಿಪ್ತ ನೋಟ ಬೀರುವ ಪ್ರಯತ್ನವಾಗಿದೆ. ಇಪ್ಪತ್ತನೆ ಶತಮಾನದ ಅರವತ್ತರ ದಶಕಗಳಲ್ಲಿ ಪಾಶ್ಚಾತ್ಯ ಕಲಾಕ್ಷೇತ್ರದಲ್ಲಿ ರೂಪುಗೊಂಡ ಸ್ತ್ರೀವಾದಿ ನೆಲೆಯ ಕಲಾಚಳವಳಿ, ಪ್ರಮುಖ ಮಹಿಳಾ ಕಲಾವಿದರು ಮತ್ತು ಅವರ ಕಲಾಕೃತಿಗಳ ಸಂಕ್ಷಿಪ್ತ ಪರಿಚಯ ಇಲ್ಲಿದೆ.

ಎರಡನೇ ಮಹಾಯುದ್ಧದ (1939–1945) ನಂತರ ಸಾಮಾಜಿಕ ವಲಯದಲ್ಲಿ ಕೆಲಸಗಳ ಒತ್ತಡ ಹೆಚ್ಚಾದುದರಿಂದ ಮನೆಯ ಕೆಲಸಗಳಿಗೆ ಸೀಮಿತವಾಗಿದ್ದ ಮಹಿಳೆಯನ್ನು ಪುರುಷವರ್ಗವೇ ಸಾಮಾಜಿಕ ಹೊರವಲಯದಲ್ಲಿ ಕಾರ್ಯನಿರ್ವಹಣೆಗೆ ಪ್ರೇರಿಸಿತು. ಇದರಿಂದ ಹೊಸ ಸ್ವಾತಂತ್ರ್ಯವನ್ನು ಅನುಭವಿಸಿದ ಮಹಿಳೆ ಎಚ್ಚೆತ್ತುಕೊಂಡು, ಸಂಘಟನೆಗಳ ಮೂಲಕ ಲಿಂಗತಾರತಮ್ಯದ ವಿರುದ್ಧ ದನಿ ಎತ್ತಲು ಸಾಧ್ಯವಾಯಿತು. ಕ್ರಿ.ಶ. 1960 ರ ದಶಕಗಳಲ್ಲಿ ರೂಪಿತಗೊಂಡ ಸ್ತ್ರೀವಾದಿ ಕಲಾಚಳವಳಿಯು 70ರ ದಶಕಗಳಲ್ಲಿ ಹೆಚ್ಚು ಜನಜನಿತವಾಯಿತು. ಮುಖ್ಯವಾಗಿ ಅಮೆರಿಕ, ಫ್ರಾನ್ಸ್, ಬ್ರಿಟನ್, ಜರ್ಮನಿ ದೇಶಗಳಲ್ಲಿ ಸ್ತ್ರೀಪರ ಹೆಚ್ಚು ಗಟ್ಟಿದನಿ ಹುಟ್ಟಿತು. 1971 ರಲ್ಲಿ ಲಿಂಡಾ ನೊಚ್ಲಿನ್ ಎಂಬ ಅಮೆರಿಕದ ಕಲಾವಿಮರ್ಶಕಿ ತನ್ನ "Why have there been no great women Artists" ಎಂಬ ಲೇಖನದ ಮೂಲಕ ಕಲಾವಲಯದಲ್ಲಿ ಮಹಿಳೆಯನ್ನು ಮೂಲೆಗುಂಪು ಮಾಡಿರುವುದರ ಕಡೆಗೆ ಗಮನಸೆಳೆದಳು. ನಂತರದ ದಿನಗಳಲ್ಲಿ ಮಹಿಳಾ ಕಲಾವಿದರನ್ನು ಗುರುತಿಸುವ ಕೆಲಸ ಹೆಚ್ಚು ನಿಯೋಜಿತವಾಗಿ ನಡೆದುಬಂದಿದೆ.

'ಸೌಂದರ್ಯ'ಕ್ಕೆ ಪರ್ಯಾಯ ಪದವೆಂಬಂತೆ 'ಸ್ತ್ರೀ ನಗ್ನತೆ' ಕಲಾಮಾಧ್ಯಮದಲ್ಲಿ ಬಿಂಬಿಸಲ್ಪಟ್ಟಿದೆ. ಐಷಾರಾಮಿ ಭೋಗಜೀವನದ ಅವಿಭಾಜ್ಯ ಅಂಗವಾಗಿ ಪರಿಗಣಿಸಲ್ಪಟ್ಟು, ಮಾನಸಿಕ/ಲೈಂಗಿಕ ಶೋಷಣೆಗೆ ಒಳಗಾಗುತ್ತ ಬಂದ ಮಹಿಳಾವರ್ಗವನ್ನು ಮೊದಲಿನಿಂದಲೂ ಕಲಾ ಅಧ್ಯಯನ, ಕಲಾಪ್ರದರ್ಶನ / ಮಾರುಕಟ್ಟೆ ವ್ಯವಸ್ಥೆಯಿಂದ ಹೊರಗಿಡುತ್ತ ಬರಲಾಗಿತ್ತು.

ಕಲಾಕ್ಷೇತ್ರದಲ್ಲಿ ಸ್ತ್ರೀವಾದಿ ಅಲೆ ಏಳುವುದಕ್ಕೆ ಮುಂಚೆ ಇದ್ದೂ ಇಲ್ಲದಂತೆ ಹಲವು ಮಹಿಳಾ ಕಲಾವಿದರು ಆಗಿಹೋಗಿದ್ದಾರೆ.

*ಡಾ. ಚರಿತಾ ಮೂಲತಃ ಮೈಸೂರಿನವರು. ಮೈಸೂರಿನ ಕಾವಾ ಮತ್ತು ಪಶ್ಚಿಮ ಬಂಗಾಳದ ಶಾಂತಿನಿಕೇತನದಲ್ಲಿ ಚಿತ್ರಕಲೆಯಲ್ಲಿ ಪದವಿ ಮತ್ತು ಸ್ನಾತಕೋತ್ತರ ಪದವಿ. ಮೈಸೂರು ವಿಶ್ವವಿದ್ಯಾನಿಲಯದಿಂದ 'ಕರ್ನಾಟಕದ ಚಿತ್ರಕಲಾ ಪರಂಪರೆಯಲ್ಲಿ ಮೈಸೂರು ಸಾಂಪ್ರದಾಯಿಕ ಕಲಾವಿದರ ಪಾತ್ರ–ಒಂದು ಅಧ್ಯಯನ' ಎಂಬ ವಿಷಯದಲ್ಲಿ ಪಿಎಚ್.ಡಿ. ಪದವಿ. ಆಯ್ದ ಲೇಖನಗಳ ಸಂಗ್ರಹ 'ಉಸಿರಾಡುವ ಬಣ್ಣಗಳು' ಪ್ರಕಟಗೊಂಡಿದೆ. ಹಂಪೆಯ ಕನ್ನಡ ವಿಶ್ವವಿದ್ಯಾನಿಲಯದಲ್ಲಿ ದೃಶ್ಯಕಲಾ ವಿಭಾಗದ ಉಪನ್ಯಾಸಕಿಯಾಗಿ ಕೆಲವು ವರ್ಷ ಸೇವೆ. ಈಗ ಫ್ರೀಲಾನ್ಸ್ ಡಿಸೈನರ್ ಆಗಿ ಕೆಲಸ ಮಾಡುವುದರ ಜೊತೆಗೆ ದೃಶ್ಯಕಲಾಕ್ಷೇತ್ರದಲ್ಲಿ ಸಂಶೋಧನಾ ಯೋಜನೆಗಳಲ್ಲಿ ತೊಡಗಿದ್ದಾರೆ. 2010ರ ಆಗಸ್ಟ್ ತಿಂಗಳಿನಲ್ಲಿ ಬೆಂಗಳೂರಿನಲ್ಲಿ 'ಸಪ್ತ ಸ್ವಯಂ ಕಲಾವಿದೆಯರ ಕಲಾಪ್ರದರ್ಶನ' ಎಂಬ ಶೀರ್ಷಿಕೆಯಡಿಯಲ್ಲಿ ಏಳು ಸ್ವಯಂಶಿಕ್ಷಿತ ಕಲಾವಿದೆಯರ ಕುರಿತ ವಿಡಿಯೋ ದಾಖಲಾತಿ ಮತ್ತು ಕಲಾಪ್ರದರ್ಶನವನ್ನು ಆಯೋಜಿಸಿ ನಿರ್ವಹಿಸಿದ್ದರು.*

*ಇದು ಇವರು ಚಿತ್ರಕಲೆಯನ್ನು ಮಹಿಳಾ ದೃಷ್ಟಿಕೋನದಿಂದ ವಿಶ್ಲೇಷಿಸಿದ ಲೇಖನ.*

ಹತ್ತೊಂಬತ್ತನೆ ಶತಮಾನದ ಬರ್ಥ್ ಮಾರಿಸಾತ್ (Berthe Morisot), ಮೇರಿ ಕಸಾತ್, ಗ್ವೆನ್ ಜಾನ್ ಥರದ ಕೆಲವು ಮುಂಚೂಣಿಯಲ್ಲಿದ್ದ ಬೆರಳೆಣಿಕೆಯ ಕಲಾವಿದೆಯರನ್ನು ಹೆಸರಿಸಬಹುದು. ಹೊರಗಿನ ಪ್ರಭಾವಗಳನ್ನು ಹೊರತುಪಡಿಸಿ ಇವರೆಲ್ಲರ ಚಿತ್ರಗಳಲ್ಲಿರುವ ಸಾಮಾನ್ಯ ಅಂಶವೆಂದರೆ – 'ಮೌನ'.

ಮಹಿಳೆಯರ ಖಾಸಗಿ ಬದುಕಿನ ಕ್ಷಣಗಳಲ್ಲಿ ಅಡಗಿದ ಮೌನ ಇವರೆಲ್ಲರ ಕೃತಿಗಳಲ್ಲಿ ಮೂಡಿದೆ. ಹಾಗೆಯೇ ಇವರ ಚಿತ್ರಗಳ ರೂಪದರ್ಶಿಯೂ ಮಹಿಳೆಯೇ! ಓದಿನಲ್ಲಿ ತಲ್ಲೀನೆಯಾಗಿರುವ ಹುಡುಗಿ/ಮಹಿಳೆ, ಉದ್ಯಾನವನದಲ್ಲಿ ತನ್ನನ್ನು ತಾನು ಮರೆತು ಕುಳಿತ ಮಹಿಳೆ, ಮಕ್ಕಳ ಪಾಲನೆಯಲ್ಲಿ ತೊಡಗಿರುವ ಮಹಿಳೆ, ತನ್ನಷ್ಟಕ್ಕೆ ತಾನು ಗೃಹಕಾರ್ಯಗಳಲ್ಲಿ ಮಗ್ನಳಾಗಿರುವ, ಬಟ್ಟೆ ಹೊಲಿಯುವ ಮಹಿಳೆ– ಇತ್ಯಾದಿ ಎಲ್ಲಾ ಚಿತ್ರಗಳಲ್ಲೂ ಗಾಢವಾದ ಮೌನ ಅಡಗಿ ಕುಳಿತಂತೆ ಭಾಸವಾಗುತ್ತದೆ. ಸ್ಫೋಟಗೊಳ್ಳದ ಯಾವುದೋ ಅವ್ಯಕ್ತ ಮಗ್ನತೆ ಈ ಎಲ್ಲಾ ಚಿತ್ರಗಳ ಜೀವಾಳ. ಗಾಢ ನಿಶ್ಶಬ್ದದ ಪರಿಧಿಯೊಳಗೇ ತನ್ನ ಲೋಕ ಕಟ್ಟಿಕೊಳ್ಳುವ ಮಹಿಳೆಯ ತಾಳ್ಮೆ ಮತ್ತು ಗಾಢಸ್ಮೃತಿ ನೋಡುಗರನ್ನು ಆವರಿಸಿಕೊಳ್ಳುತ್ತದೆ.

ಗ್ವೆನ್ ಜಾನ್‌ಳ ಚಿತ್ರಗಳಲ್ಲಿ ಕಂಡುಬರುವ ಅಷ್ಟೂ ಸ್ತ್ರೀಪಾತ್ರಗಳು ಪೇಲವವಾಗಿ, ಬತ್ತಿಹೋದಂತಿರುವ ದೇಹ–ಮನಸ್ಸುಗಳನ್ನು ಬಿಂಬಿಸುತ್ತವೆ. ಆಕೆಯ ಎಲ್ಲಾ ಕೃತಿಗಳು ತಣ್ಣನೆಯ, ಒಳಹರಿವಿನ ದುಗುಡ ತುಂಬಿಕೊಂಡಂತೆ ಕಾಣುತ್ತವೆ. ಸ್ವಲ್ಪ ಸಹಾನುಭೂತಿ ತೋರಿದರೂ ಧುಮ್ಮಿಕ್ಕಿ ಹರಿದುಬಿಡಲು ಹಾತೊರೆಯುತ್ತಿರುವ ಅದುಮಿಟ್ಟ ಬಿಕ್ಕು ಅದು. ಅಂತರ್ಮುಖತ್ವದ ಗಾಢಛಾಯೆ ಈ ಪ್ರತಿಯೊಬ್ಬ ಕಲಾವಿದೆಯ ಕಲಾಕೃತಿಯಲ್ಲಿ ಕಂಡುಬರುವ ಸಾಮಾನ್ಯ ಅಂಶ. ಮಹಿಳಾ ಕಲಾವಿದರಿಂದ ಚಿತ್ರಿತಗೊಂಡ 'ನಗ್ನತೆ' ಲೈಂಗಿಕ ಶೋಷಣೆಯ ವಿರುದ್ಧ ಎತ್ತಿದ ದನಿಯಂತೆ ಮುಟ್ಟುತ್ತದೆಯೇ ಹೊರತು ಚಪಲ ಹೆಚ್ಚಿಸುವ, ಆಸ್ವಾದ್ಯಗೊಳ್ಳುವ, ತೋರಿಕೆಯ ಬಾಹ್ಯಸೌಂದರ್ಯದ ಹಗುರ ಅಭಿವ್ಯಕ್ತಿಯಂತಲ್ಲ.

ಸ್ತ್ರೀ ಮತ್ತು ಪುರುಷರ ದೃಷ್ಟಿಗ್ರಹಣದ ಮೂಲವ್ಯತ್ಯಾಸದ ಕುರಿತಂತೆ ಮಾರ್ಕ್ಸ್‌ವಾದಿ ವಿಮರ್ಶಕ ಜಾನ್ ಬರ್ಜರ್ ತನ್ನ 'Ways of Seeing' ಎಂಬ ಪುಸ್ತಕದಲ್ಲಿ ಹೀಗೆ ಹೇಳುತ್ತಾನೆ : "Men look at women, women watch themselves being looked at" (ಪುರುಷರು ಸ್ತ್ರೀಯರನ್ನು ನೋಡುತ್ತಾರೆ, ಸ್ತ್ರೀಯರು ನೋಡಲ್ಪಡುತ್ತಿರುವ ತಮ್ಮನ್ನೇ ಗಮನಿಸಿಕೊಳ್ಳುತ್ತಾರೆ.)

ಸ್ತ್ರೀದೇಹ ಮತ್ತು ಲೈಂಗಿಕ ಅವಯವಗಳ ಸಾಂಕೇತಿಕ ಅಭಿವ್ಯಕ್ತಿಯ ಮೂಲಕ ವಿಶಿಷ್ಟ ಕಲಾಕೃತಿಗಳನ್ನು ರಚಿಸಿದಾಕೆ ಅಮೆರಿಕಾದ ಜಾರ್ಜಿಯಾ ಓಕೀಫ್. ಹೂವಿನ ಸರಣಿ ಚಿತ್ರಗಳು ಈಕೆಯ ದಿಟ್ಟ ಅಭಿವ್ಯಕ್ತಿಯ ವಸ್ತುವಿಷಯವಾಗಿದೆ. ದಮನಿತ ಭಾವನೆಗಳಿಗೆ ಬಣ್ಣಕೊಟ್ಟ ಗ್ವೆನ್ ಜಾನ್, ಕಸಾತ್, ಮಾರಿಸಾತ್‌ರಿಗಿಂತ ಭಿನ್ನವಾಗಿ ಕಾಣಿಸುತ್ತಾಳೆ ಈಕೆ. ಕುದುರೆಯ ತಲೆಬುರುಡೆಯೊಂದಿಗೆ ಇರಿಸಿದ ಹೂವಿನ ಸರಣಿಚಿತ್ರಗಳು ಲೈಂಗಿಕತೆಗೆ ಹೊಸ ಆಯಾಮವನ್ನು ಒದಗಿಸುತ್ತವೆ. (ಕುದುರೆ ಮತ್ತು ಹೂವು – ಎರಡೂ ಲೈಂಗಿಕ ಸಂಕೇತಗಳು). ಭಾರತದ 'ತಾಂತ್ರಿಕ' ಕಲೆಯನ್ನೂ ಈಕೆಯ ಚಿತ್ರಗಳು ನೆನಪಿಗೆ ತರುತ್ತವೆ.



'ಯುವರ್‌ಗೇಜ್ ಹಿಟ್ಸ್ ದ ಸೈಡ್ ಆಫ್ ಮೈ ಫೇಸ್ – ಬಾರ್ಬರಾ ಕ್ರೂಗರ್'

'ಯುವರ್ ಬಾಡಿ ಈಸ್ ಎ ಬ್ಯಾಟಲ್ ಗ್ರೌಂಡ್ – ಬಾರ್ಬರಾ ಕ್ರೂಗರ್'

*ದೌರ್ಜನ್ಯಕ್ಕೆ ಸಂಬಂಧಪಟ್ಟಂತೆ, ಎಲ್ಲ ಮಹಿಳೆಯರನ್ನು ಒಂದೇ ವರ್ಗವೆಂದು ಪರಿಗಣಿಸಬೇಕು. ಓರ್ವ ಮಹಿಳೆ ಶ್ರೀಮಂತಳೇ ಆಗಿರಲಿ ಅಥವಾ ಬಡವಳೇ ಆಗಿರಲಿ ಅವಳು ದೌರ್ಜನ್ಯಕ್ಕೆ ಒಳಗಾಗಿರುತ್ತಾಳೆ. ಆದುದರಿಂದ ಎಲ್ಲ ಮಹಿಳೆಯರು ಒಟ್ಟಾಗಿ ದೌರ್ಜನ್ಯದ ವಿರುದ್ಧ ಹೋರಾಡಬೇಕಾಗಿದೆ. ಯಾಕೆಂದರೆ ಒಬ್ಬ ಶ್ರೀಮಂತ ಕೈಗಾರಿಕೋದ್ಯಮಿ ಕೂಡ ತನ್ನ ಹೆಂಡತಿಯನ್ನು ಭೋಗವಸ್ತುವೆಂದು ಪರಿಗಣಿಸುವುದರ ಮೂಲಕ, ಸಂಪತ್ತು ಮತ್ತು ಒಡವೆಗಳ ಮೂಲಕ ಸಮಾಧಾನಪಡಿಸುತ್ತ ಅವಳ ಎಲ್ಲ ವ್ಯಕ್ತಿತ್ವವನ್ನು ಬೆಳೆಯದಂತೆ ಮಾಡಿ, ಕತ್ತು ಹಿಸುಕಿ ಅವಳನ್ನು ಶೋಷಿಸುತ್ತಾನೆ. ಆತನಿಗೆ ಆಕೆ ಒಂದು ಮನರಂಜನೆ ವಸ್ತು. ಮನೆಯಲ್ಲಿ ಬೊಂಬೆಗಳಿರುವುದಿಲ್ಲವೇ ಅವುಗಳಿಗೆ ಕೀ ಕೊಡಬೇಕು. ಈಕೆಗೆ ಬೇಡ ಅಷ್ಟೆ. ಇದೇ ರೀತಿ ಓರ್ವ ಬಡ ಕೂಲಿಕಾರನೂ ಸಹ ತನ್ನ ದಿವಸದ ದುಡಿಮೆಯನ್ನು ಹೆಂಡಕ್ಕೆ ಹಾಕಿ ಹೆಂಡತಿಯೊಂದಿಗೆ ಮನಸ್ಸಿಗೆ ಬಂದಂತೆ ವರ್ತಿಸುವುದರ ಮೂಲಕ ಶೋಷಿಸುತ್ತಾನೆ. ಬರ್ನಾಡ್ ಷಾ ಕೇಳುತ್ತಾರೆ–" ನಿರಂತರವಾಗಿ ದುಡಿಯುತ್ತಿರುವ ಮಹಿಳೆಯರಿಗೆ ಸಂಬಳ ಕೊಡುವವರು ಯಾರು?"*

*–ಜಯಪ್ರಕಾಶ ಮಾವಿನಕುಳಿ [ಮಹಿಳೆಯರೇ ಮತ್ತು...(ಪು.14–15)]*

ಜರ್ಮನಿಯ ಕ್ಯಾಥೆ ಕೋಲ್‌ವಿಝ್ ಮತ್ತೊಬ್ಬ ಪ್ರೌಢ ಕಲಾವಿದೆ. ಮೊದಲ ಮಹಾಯುದ್ಧದಲ್ಲಿ ತನ್ನ ಮಗನನ್ನು ಕಳೆದುಕೊಳ್ಳುವ ಈಕೆ ತನ್ನ ಚಿತ್ರಸರಣಿಯಲ್ಲಿ ಹೆಪ್ಪುಗಟ್ಟಿದ ನಿರಾಸೆ, ಭಯ, ದುಃಖವನ್ನು ಕಪ್ಪು–ಬಿಳುಪಿನ ಸಶಕ್ತ ಮಾಧ್ಯಮದಲ್ಲಿ ಅಭಿವ್ಯಕ್ತಿಸಿದ್ದಾಳೆ. ವುಡ್ ಕಟಿಂಗ್, ಎಚಿಂಗ್, ಲಿಥೋಗ್ರಾಫ್ ಮೂಲಕ ಭಾರವಾದ ಮತ್ತು ಅಷ್ಟೇ ದೃಢವಾದ ದೃಶ್ಯರೂಪಣ ಸೃಷ್ಟಿಸಿದ್ದಾಳೆ. ಶಿಲ್ಪಮಾಧ್ಯಮವೂ ಈಕೆಯ ಅಭಿವ್ಯಕ್ತಿಗೆ ಹೆಗಲುಕೊಟ್ಟಿದೆ. ಅತೀ ಶಕ್ತವಾಗಿ ಸಂವಹಿಸುವ ಆಕೆಯ ದುಃಖದ ಭಾರ ಇಡೀ ಸ್ತ್ರೀವರ್ಗದ ಪ್ರಾತಿನಿಧಿಕ ಭಾವವಾಗಿ ಉಳಿಯುತ್ತದೆ. ಒಟ್ಟಾರೆ ಸ್ತ್ರೀಸಂವೇದನೆಗೆ ಸಾಮೂಹಿಕ ನೆಲೆಗಟ್ಟಿನ ಚೌಕಟ್ಟಿರುವಂತೆ ಕಂಡುಬರುತ್ತವೆ.

1960–70 ರ ದಶಕಗಳಲ್ಲಿ ಮತ್ತು ನಂತರದ ದಿನಗಳಲ್ಲಿ ಕಂಡುಬಂದ ಸ್ತ್ರೀವಾದಿ ಅಲೆಯ ಮುಂಚೂಣಿಯ ಪ್ರಮುಖ ಕಲಾವಿದರಲ್ಲಿ ಬಾರ್ಬರಾ ಕ್ರೂಗರ್, ಪೌಲಾ ರೆಗೊ, ಗೆರಿಲ್ಲ ಗರ್ಲ್ಸ್ (ಸಮೂಹ), ಜೂಡಿ ಶಿಕಾಗೊ, ಇವಾ ಹೆಸ್ ಮುಂತಾದವರನ್ನು ಹೆಸರಿಸಬಹುದು.

ಬಂಡಾಯದ ದಿಟ್ಟನಿಲುವು, ಹರಿತ ಅಭಿವ್ಯಕ್ತಿ ಹಲವು ಕಲಾವಿದೆಯರಿಂದ ಸಾಧ್ಯವಾಯಿತು. ಪೋರ್ಚುಗೀಸ್ ಕಲಾವಿದೆ ಪೌಲಾ ರೆಗೊ ಅಂಥವರ ಪೈಕಿ ಒಬ್ಬಳು. ಮಕ್ಕಳ ಕಥೆಗಳ ಕಾಮಿಕ್ ಶೈಲಿಯ ನಿರೂಪಣೆ ಈಕೆಯ ಪ್ರಾರಂಭದ ಚಿತ್ರಗಳಲ್ಲಿ ಕಂಡುಬರುತ್ತದೆ. 1990 ರ ದಶಕಗಳ 'ಡಾಗ್ ವುಮನ್' ಮತ್ತು 'ಡಾನ್ಸಿಂಗ್ ಆಸ್ಟ್ರಿಚಸ್' ಸರಣಿಯ ಚಿತ್ರಗಳು ಅದುವರೆಗಿನ ದೃಶ್ಯ ಸಿದ್ಧಾಂತದ 'ಸೌಂದರ್ಯ'ದ ಪರಿಕಲ್ಪನೆಯನ್ನು ಬೆಚ್ಚಿಬೀಳಿಸುವಷ್ಟು ಸಶಕ್ತವಾದ ಹೊಸಭಾಷೆ ಸೃಷ್ಟಿಸಿದೆ.

ಕಥಾನಿರೂಪಣಾ ಶೈಲಿಯ, ಕುತೂಹಲಭರಿತ ನಾಟಕದ ಸ್ತಬ್ಧಚಿತ್ರದಂತೆ ಕಾಣುವ ಈಕೆಯ ಚಿತ್ರಗಳು ತಮ್ಮೊಳಗೆ ವಿಚಿತ್ರ ನಿಗೂಢತೆಯನ್ನು ಒಳಗೊಂಡಿವೆ. ಆಕೆಯ 'ದ ಮೇಯ್ಡ್ಸ್', 'ದ ಫಿಟ್ಟಿಂಗ್', 'ದ ಫ್ಯಾಮಿಲಿ' ಚಿತ್ರಗಳು ಸಾಂಕೇತಿಕ ದೃಶ್ಯನಿರೂಪಣೆ ಅತಿವಿಶಿಷ್ಟವಾದ ಮನೋ ಆವರಣವನ್ನು ಸೃಷ್ಟಿಸುತ್ತವೆ. ಮನುಷ್ಯ ಸಂಭಂಧಗಳ ವೈಚಿತ್ರ್ಯ ಮತ್ತು ನಿಗೂಢತೆ ಈ ಚಿತ್ರಗಳಲ್ಲಿ ಮೂಡಿಬಂದಿದೆ.

'ಡಾಗ್ ವುಮನ್' ಮತ್ತು 'ಡಾನ್ಸಿಂಗ್ ಆಸ್ಟ್ರಿಚಸ್' ಈಕೆಯ ಪ್ರಸಿದ್ಧ ಸರಣಿ ಚಿತ್ರಗಳು. "ಮಹಿಳೆಯನ್ನು ನಾಯಿಗೆ ಹೋಲಿಸಿದರೆ ಅದನ್ನು ನಿಕೃಷ್ಟವಾಗಿ ಭಾವಿಸಬೇಕಿಲ್ಲ. ಬದಲಾಗಿ ಆ ಮಹಿಳೆಯನ್ನು ಮತ್ತಷ್ಟು ಸಬಲಳಾಗಿ ಕಾಣಬೇಕು. ತನ್ನ ರಕ್ಷಣೆಯನ್ನು ತಾನು ಮಾಡಿಕೊಳ್ಳಬಲ್ಲ, ಆಕ್ರಮಣಕಾರಿಯಾಗಿರುವುದು ಒಳ್ಳೆಯದೆ. ಮಹಿಳೆಯನ್ನು ನಾಯಿಗೆ ಹೋಲಿಸಿದರೆ ಆಶ್ಚರ್ಯಪಡುವಂಥದ್ದೇನಿಲ್ಲ!" ಎಂಬುದು ಈಕೆಯ ಹೇಳಿಕೆ. ಅಂತೆಯೇ ಶಕ್ತಿಯುತವಾದ, ಆತ್ಮಸ್ಥೈರ್ಯದ ಆಕ್ರಮಣಕಾರಿ ಮಹಿಳೆಯ ಚಿತ್ರಣ ಈ ಮಾತುಗಳನ್ನು ಬಲಪಡಿಸುತ್ತವೆ!

'ಡಾನ್ಸಿಂಗ್ ಆಸ್ಟ್ರಿಚಸ್' ಸರಣಿ ಮೂಲತಃ ವಾಲ್ಟ್ ಡಿಸ್ನಿಯ 'ಫ್ಯಾಂಟೇಶಿಯ' ಎಂಬ ಕಾರ್ಟೂನ್ ಸರಣಿಯಿಂದ ಪ್ರೇರಿತವಾದುದು. ಆಕೆಯ ಬಹುತೇಕ ಚಿತ್ರಗಳಂತೆ ಇಲ್ಲಿಯೂ ಕೂಡ ಪ್ರಾಣಿ-ಪಕ್ಷಿಗಳಿಗೆ ಮನುಷ್ಯರನ್ನು ಹೋಲಿಸುವ ಭ್ರಾಮಕ ಮನೋಧರ್ಮದ ನಿರೂಪಣೆ ಕಾಣಬಹುದು. ಇಲ್ಲಿನ ನರ್ತಕಿಯರೆಲ್ಲರೂ ಮಧ್ಯವಯಸ್ಕರು. ಸುಂದರವಲ್ಲದ, ಹಲವು ಒತ್ತಡಗಳಿಗೆ ಒಳಗಾದಂತೆ ಕಾಣುವ, ಒರಟು ದೇಹದ ಮಹಿಳೆಯರು. ಕನಸುಗಳನ್ನು ಪೂರೈಸಿಕೊಳ್ಳಲಾಗದ, ಲೈಂಗಿಕ ಅಸಂತೃಪ್ತಿಯ, ಹಲವು ನಿರೀಕ್ಷೆಗಳನ್ನಿಟ್ಟುಕೊಂಡ ಭಾವ ಈ ಚಿತ್ರದಲ್ಲಿದೆ. ಇಲ್ಲಿ ಸ್ತ್ರೀರೂಪದ ಸಹಜ ಮತ್ತು ನೈಜ ನಿರೂಪಣೆಯ ಸಾಧ್ಯತೆಯನ್ನು ಹೆಚ್ಚು ಪೂರಕವಾಗಿ ಬಳಸಿಕೊಳ್ಳಲಾಗಿದೆ.

ಮಹಿಳಾಮನೋಧರ್ಮದ ಒತ್ತಾಸೆಗಳಿಗೆ ಪೂರಕವಾಗಿ ತಮಾಷೆ, ವ್ಯಂಗ್ಯದ ದೃಶ್ಯರೂಪಣೆಯ ಜೊತೆಗೆ ತೀಕ್ಷ್ಣ ಬರಹಗಳನ್ನೂ ಅಭಿವ್ಯಕ್ತಿ ಸಾಧನವಾಗಿ ಬಳಸಿಕೊಂಡ ಪ್ರಮುಖ ಕಲಾವಿದೆ ಅಮೆರಿಕಾದ ಬಾರ್ಬರಾ ಕ್ರೂಗರ್. 'Mademoiselle' ನಿಯತಕಾಲಿಕೆಯ ಹೆಡ್ ಡಿಸೈನರ್ ಆದ ಈಕೆ 'ಪೋಸ್ಟರ್' ಮಾಧ್ಯಮದ ಮೂಲಕ ಹೆಚ್ಚು ಸುಲಭವಾಗಿ ಮತ್ತು ಪ್ರಭಾವಶಾಲಿಯಾಗಿ ಜನರನ್ನು ತಲುಪುವ



ನ್ಯೂಡ್ ಗರ್ಲ್ - ಗ್ವೆನ್‌ಜಾನ್



ಮದರ್ ಅಂಡ್ ಚೈಲ್ಡ್ - ಮೇರಿ ಕಸಾತ್

*ಕ್ರಿಸ್ತ ಶಕದ ಪ್ರಾರಂಭದವರೆಗೆ ಸ್ತ್ರೀ ಉಪನಯನಕ್ಕೆ ಅರ್ಹಳಾಗಿದ್ದಳು. ಸ್ತ್ರೀಯೂ ಪುರುಷನಂತೆ ಬ್ರಹ್ಮಚರ್ಯ ನಡೆಸಿ ಪ್ರಾಪ್ತ ವಯಸ್ಸಿನಲ್ಲಿ ವಿವಾಹ ಆಗಬಹುದಿತ್ತು. ಗಾರ್ಗಿ ಹಾಗೂ ಮೈತ್ರೇಯಿ ಆಗಿನ ಕಾಲದ ಪ್ರಖ್ಯಾತ ಬ್ರಹ್ಮಚಾರಿಣಿಯರು ಎನ್ನಿಸಿದ್ದಾರೆ. ಪುತ್ರನಿಲ್ಲದ ಪಕ್ಷದಲ್ಲಿ ಪುತ್ರಿಯು ಆಸ್ತಿಗೆ ಹಕ್ಕುದಾರಳಾಗುತ್ತಿದ್ದಳಲ್ಲದೇ ತಾಯಿತಂದೆಗಳ ಅಂತ್ಯ ಸಂಸ್ಕಾರವನ್ನು ಆಕೆಯೇ ಮಾಡಬೇಕಾಗುತ್ತಿತ್ತು. ವಿಧವಾ ವಿವಾಹ ಆಚರಣೆಯಲ್ಲಿದ್ದವು. ಪತಿ ಮೃತನಾದ ಮರುಗಳಿಗೆಯಲ್ಲಿ "ಅಜ ಪಂಚಾದನ" ವ್ರತಮಾಡುವುದರ ಮೂಲಕ ಸ್ತ್ರೀ ಮರುವಿವಾಹ ಆಗುವ ಅವಕಾಶವಿತ್ತು. "ಮರಣ ಹೊಂದಿರುವ ಪತಿಯ ಪಕ್ಕದಲ್ಲಿಯ ಸ್ತ್ರೀಯೆ ಏಳು; ನಿನ್ನ ಕೈ ಹಿಡಿಯಲು ಬಯಸುತ್ತಿರುವವನನ್ನು ಒಂದುಗೂಡು" ಎಂಬ ವೇದಮಂತ್ರ ಇದಕ್ಕೆ ಸಾಕ್ಷಿಯಾಗಿದೆ.*

*-ಜಯಪ್ರಕಾಶ ಮಾವಿನಕುಳಿ (ಅದೇ ಪು.6)*

ಕೃತಿಗಳನ್ನು ರಚಿಸಿದ್ದಾಳೆ. ಕಪ್ಪು-ಬಿಳುಪಿನ ಸಶಕ್ತ ಛಾಯಾಚಿತ್ರದ ಜೊತೆಗೆ ಕೆಂಪು ಹಿನ್ನೆಲೆಯಲ್ಲಿ ಮೂಡಿದ ಕಪ್ಪು-ಬಿಳುಪಿನ ಅಕ್ಷರಗಳು ನೋಡುಗನನ್ನು ತಕ್ಷಣ ಸೆಳೆಯುವುದಲ್ಲದೆ, ತೀಕ್ಷ್ಣ ಸವಾಲನ್ನು ಸಮರ್ಥವಾಗಿ ಜನರಿಗೆ ತಲುಪಿಸುತ್ತವೆ.

ಕೊಳ್ಳುಬಾಕ ಸಂಸ್ಕೃತಿಯನ್ನು ಬಿಂಬಿಸುವ 'I shop, therefore I am' ಎಂಬ ಬರಹದ ಕೆಂಪು ಕಾರ್ಡನ್ನು ಹಿಡಿದು ತೋರಿಸುತ್ತಿರುವ ಕಪ್ಪು-ಬಿಳುಪಿನ ಅಂಗೈಯ ಚಿತ್ರ ಶಾಪಿಂಗ್ ಬ್ಯಾಗ್‌ಗಳ ಮೇಲೆ ಮುದ್ರಿತವಾದುದು, ಮನರಂಜನೆ ಯೊದಗಿಸುವುದರ ಜೊತೆಗೆ ಗಂಭೀರ ಯೋಚನೆಗೂ ಒಳಗುಮಾಡುತ್ತದೆ. ಬಿಲ್ ಬೋರ್ಡ್‌ಗಳು, ಟೀ-ಷರ್ಟ್, ಷಾಪಿಂಗ್ ಬ್ಯಾಗ್, ದೂರದರ್ಶನ, ಬಸ್ ನಿಲ್ದಾಣ - ಈ ಎಲ್ಲವೂ ಈಕೆಯ ಕಲಾಪ್ರದರ್ಶನದ ಸುಲಭ ತಾಣಗಳು. ಎಂಬತ್ತರ ದಶಕಗಳಲ್ಲಿ ಪ್ರಚಲಿತವಾಗಿದ್ದ ಒಡೆದು ಕಟ್ಟುವ ಮನೋಧರ್ಮ (Deconstruction) ಈಕೆಯ ಕೃತಿಗಳಲ್ಲೂ ಕಂಡುಬಂದಿದೆ. ಸಾಂಪ್ರದಾಯಿಕ ನಿಲುವನ್ನು ತಿರಸ್ಕರಿಸಿ ಹೊಸ ಚಿಂತನೆಗಳಿಗೆ ಚಾಲನೆ ಕೊಡುವ ನಿಟ್ಟಿನಲ್ಲಿ ಈಕೆಯ ಕೃತಿಗಳು ಪ್ರಾಮುಖ್ಯ ಪಡೆದುಕೊಳ್ಳುತ್ತವೆ.

'Your gaze hits the side of my face' - ಹೆಣ್ಣು ಶಿಲ್ಪದ ಮುಖದ ಒಂದು ಪಾರ್ಶ್ವದ ಮೇಲೆ ಈ ಹೇಳಿಕೆಯಿದೆ. "ನಿನ್ನ ನೋಟ ನನ್ನ ಮುಖದ ಪಾರ್ಶ್ವಕ್ಕೆ ತಗಲುತ್ತಿದೆ". ಇದು ಹೆಣ್ಣನ್ನು ದಿಟ್ಟಿಸುವ ಪೂರ್ವಾಗ್ರಹಿತ ಪುರುಷನೋಟವನ್ನು ಕುರಿತದ್ದು. ಈಕೆಯ ಇತರೆ ಪ್ರಮುಖ ಕೃತಿಗಳು :

'ಯುವರ್ ಬಾಡಿ ಈಸ್ ಎ ಬ್ಯಾಟ್ಲ್ ಗ್ರೌಂಡ್', 'ಯು ಆರ್ ನಾಟ್ ಯುವರ್‌ಸೆಲ್ಫ್', 'ಇಟ್ಸ್ ಎ ಸ್ಮಾಲ್ ವರ್ಲ್ಡ್, ಬಟ್ ನಾಟ್ ಇಫ್ ಯು ವಾಂಟ್ ಟು ಕ್ಲೀನ್ ಇಟ್', 'ಟೆಲ್ ಅಸ್ ಸಮ್‌ಥಿಂಗ್ ವಿ ಡೋಂಟ್ ನೋ'

ಲೈಂಗಿಕತೆ, ಲಿಂಗ ತಾರತಮ್ಯ, ಹಿಂಸೆ, ರಾಜಕೀಯ, ಸಾಮಾಜಿಕ ಸಮಸ್ಯೆಗಳನ್ನು ಪ್ರಖರ ವಿಮರ್ಶಾತ್ಮಕ ಬರಹ-ದೃಶ್ಯಗಳ ಮೂಲಕ ಈಕೆಯ ಕೃತಿಗಳು ಚರ್ಚೆಗೊಳಪಡಿಸುತ್ತವೆ.

1985ರಲ್ಲಿ ನ್ಯೂಯಾರ್ಕ್‌ನಲ್ಲಿ ರೂಪಿತಗೊಂಡ 'ಗೆರಿಲ್ಲ ಗರ್ಲ್ಸ್' ಎಂಬ ಸಂಘಟನೆ ಸ್ತ್ರೀವಾದಿ ಚಿಂತಕರು, ಕಲಾವಿದರು, ಲೇಖಕರು, ನಾಟಕಕಾರರನ್ನು ಒಳಗೊಂಡಿದೆ. ಗೊರಿಲ್ಲ ಮುಖವಾಡ ಧರಿಸಿ ಕಾಣಿಸಿಕೊಳ್ಳುವ ಇವರು ತಮ್ಮನ್ನು ವೈಯಕ್ತಿಕವಾಗಿ ಗುರ್ತಿಸಿ ಕೊಳ್ಳುವುದಕ್ಕಿಂತ ಹೆಚ್ಚಾಗಿ ಪ್ರಚಲಿತ ಸಮಸ್ಯೆಗಳತ್ತ ಗಮನ ಸೆಳೆಯುವ



ಡಾನ್ಸಿಂಗ್ ಆಸ್ಟ್ರಿಚಸ್ – ಪೌಲಾ ರೆಗೊ

*'The History of Mankind is a history of repeated injuries and usurpationt on the part of the man toward woman having indirect object the eatablishment of a tyranny over her'*

***-Women's Rights Convention***
*Manifesto, Seneca, Falls, 1848*

ಕುರಿತು ಆಸಕ್ತರು. ಇವರು ತಮ್ಮನ್ನು ರಾಬಿನ್ ಹುಡ್, ಬ್ಯಾಟ್ ಮ್ಯಾನ್ ಥರದ ಜನಾನುರಾಗಿ ಸುಧಾರಕರಿಗೆ ಹೋಲಿಸಿಕೊಳ್ಳುತ್ತಾರೆ. ಹಾಸ್ಯ ಮತ್ತು ನಿಗೂಢತೆಯ ಮೂಲಕ ಜನರನ್ನು ಸುಲಭವಾಗಿ ಸೆಳೆಯುವ ಜಾಣ ತಂತ್ರ ಇವರದು. ಹೆಣ್ಣನ್ನು ಸೌಂದರ್ಯಕ್ಕೆ ಪರ್ಯಾಯವಾಗಿ ಪರಿಗಣಿಸುವ ಮತ್ತು ಆ ಮೂಲಕ ಆಕೆಯನ್ನು ಭೋಗಸಾಮಗ್ರಿಯ ಮಟ್ಟಕ್ಕೆ ಇಳಿಸುವ ಮನೋಸ್ಥಿತಿಯನ್ನು ಗೊರಿಲ್ಲ ಮುಖವಾಡ ಧರಿಸಿ ವ್ಯಂಗ್ಯ ಮಾಡುತ್ತಾರೆ.

ಪ್ರಸಿದ್ಧ ನಿಯೋಕ್ಲಾಸಿಕಲ್ ಕಲಾವಿದ ಡೊಮಿನಿಕ್ ಇಂಗ್ರೆಯ 'ಗ್ರ್ಯಾಂಡ್ ಒಡಲಿಸ್ಕ್' ಎಂಬ ಕೃತಿಯಲ್ಲಿರುವ ನಗ್ನಸ್ತ್ರೀ ಚಿತ್ರಕ್ಕೆ ಗೊರಿಲ್ಲ ಮುಖವಾಡ ಹಾಕಿದ ಹಳದಿ ಒನ್ನೆಲೆಯ ಪೋಸ್ಟರ್ ಹೀಗೆ ಹೇಳುತ್ತದೆ:

"Do women have to be naked to go into the Met. Museum?" (1989)– (ಮೆಟ್ರೊಪಾಲಿಟನ್ ಮ್ಯೂಸಿಯಂನಲ್ಲಿ ಜಾಗ ಪಡೆಯಲು ಸ್ತ್ರೀಯರು ನಗ್ನರಾಗಲೇಬೇಕೆ?)

"ನಮ್ಮಕಲಾ ವಿಭಾಗದಲ್ಲಿರುವ ಕಲಾವಿದರಲ್ಲಿ ಮಹಿಳೆಯರು ಶೇಕಡಾ ಐದಕ್ಕಿಂತ ಕಡಿಮೆ. ಆದರೆ ಶೇಕಡಾ ಎಂಬತ್ತೈದರಷ್ಟು ನಗ್ನಚಿತ್ರಗಳು ಮಹಿಳೆಯರವೇ" ಎಂಬ ಕುರಿತಾಗಿಯೂ ಈ ಪೋಸ್ಟರ್ ಗಮನ ಸೆಳೆಯುತ್ತದೆ.

"ಜಗತ್ತಿನ ಎಲ್ಲೆಡೆ ಮ್ಯೂಸಿಯಂಗಳಲ್ಲಿ ಮಹಿಳೆಯರನ್ನು ಬಂಧಿಸಿ, ಕಣ್ಮರೆಮಾಡಿ ಇಡಲಾಗಿದೆ. ಆ ಮ್ಯೂಸಿಯಂಗಳು ಹೆಚ್ಚು ಮಹಿಳಾ ಕಲಾವಿದರ ಕೃತಿ ಪ್ರದರ್ಶಿಸುವಂತೆ ಒತ್ತಾಯಿಸುತ್ತೇವೆ" ಎಂಬುದು ಮತ್ತೊಂದು ಪೋಸ್ಟರ್‌ನಲ್ಲಿನ ಹೇಳಿಕೆ. ಪ್ರಸಿದ್ಧ ಕಲಾವಿದೆಯರ ಭಾವಚಿತ್ರಗಳ ಕೊಲ್ಯಾಜ್ ಮಾಡಿ ಅವರನ್ನು ಕಂಬಿಗಳ ಹಿಂದೆ ಬಂಧಿಸಿರುವಂತೆ ತೋರಿಸಲಾಗಿದೆ.

'ಗೆರಿಲ್ಲಾ ಗರ್ಲ್ಸ್' ಸಂಘಟನೆ 1989 ರಲ್ಲಿ ಹೊರಡಿಸಿರುವ ಪಟ್ಟಿ ಹೀಗಿದೆ :

**ಸ್ತ್ರೀ ಕಲಾವಿದೆಗೆ ಇರುವ ಅನುಕೂಲಗಳು :**

- ಯಶಸ್ಸಿನ ಒತ್ತಡವಿಲ್ಲದೆ ಕೆಲಸ ಮಾಡುವುದು.
- ಪುರುಷರ ಕಲಾಕೃತಿಗಳೊಂದಿಗೆ ತಮ್ಮ ಕೃತಿಗಳನ್ನು ಪ್ರದರ್ಶಿಸುವ ಗೋಜಿಗೆ ಸಿಲುಕದಿರುವುದು.
- ತನಗೆ ಎಂಬತ್ತು ವರ್ಷ ತುಂಬಿದ ನಂತರವೇ ವೃತ್ತಿಜೀವನ ಸುಧಾರಿಸ ಬಹುದೆಂಬ ಅರಿವು ಪಡೆದಿರುವುದು.
- ರಚಿಸುವ ಎಲ್ಲಾ ಕೃತಿಗಳೂ 'ಮಹಿಳೆಯಿಂದ ರಚಿತವಾದುದು' ಎಂಬ ಹಣೆಪಟ್ಟಿಗೆ ಒಳಗಾಗುವುದು.
- ಮಾತೃತ್ವ ಮತ್ತು ವೃತ್ತಿಜೀವನ – ಎರಡರಲ್ಲಿ ಒಂದನ್ನು ಆಯ್ದುಕೊಳ್ಳುವ ಅವಕಾಶ ಒದಗುವುದು.
- 'ಸಿಗಾರ್' ಸೇದುತ್ತ, ಇಟ್ಯಾಲಿಯನ್ ಸೂಟ್ ಧರಿಸಿ ಚಿತ್ರ ರಚಿಸುವ ಬಿಕ್ಕಟ್ಟು ಇಲ್ಲದಿರುವುದು.
- 'ಜೀನಿಯಸ್' ಎಂದು ಕರೆಸಿಕೊಳ್ಳುವ ಮುಜುಗರಕ್ಕೊಳಗಾಗುವ ಸಂದರ್ಭ ಒದಗದಿರುವುದು.
- ಮಕ್ಕಳನ್ನು ಪಾಲಿಸುವ ಜವಾಬ್ದಾರಿಯ ನಡುವೆ ಸಾಕಷ್ಟು 'ಬಿಡುವು' ಪಡೆಯುವ ಅವಕಾಶವಿರುವುದು.

ಲಿಂಗತಾರತಮ್ಯ ಮತ್ತು ಸ್ತ್ರೀಶೋಷಣೆಯ ಕುರಿತ ಸಮಸ್ಯೆಗಳನ್ನು ತಮ್ಮದೇ ರೀತಿಯಲ್ಲಿ ವಿಡಂಬನಾತ್ಮಕವಾಗಿ ಹಾಗೂ ಅಷ್ಟೇ ಮೊನಚಾಗಿ ಬಿಂಬಿಸುವ ಈ ಮಾತುಗಳು ಶೋಷಿತರ ಹೆಪ್ಪುಗಟ್ಟಿದ ನೋವು ಮತ್ತು ಅತಿಗಂಭೀರ ಹತಾಶೆಯನ್ನು ಪ್ರತಿನಿಧಿಸುತ್ತವೆ.

ಸ್ವಾನುಕಂಪ, ಬಿಗುಮಾನ ಮತ್ತು ಮೌನದ ಮೊರೆಹೋಗಿದ್ದ ಮಹಿಳೆ ನಿಧಾನ ವಾಗಿಯಾದರೂ ಹೆಚ್ಚು ತೀಕ್ಷ್ಣ, ದಿಟ್ಟ ಮತ್ತು ಸ್ಪಷ್ಟವಾದ ಅಭಿವ್ಯಕ್ತಿ ಗಳಿಸಿ ಕೊಂಡಿರುವುದನ್ನು ಗಮನಿಸಬೇಕು. ತನ್ನನ್ನು ಸಮಾಜದ ವಿವಿಧ ಸ್ತರಗಳಲ್ಲಿ ಅನನ್ಯವಾಗಿ ಗುರುತಿಸಿಕೊಳ್ಳುವ ಜೊತೆಗೆ ತನ್ನನ್ನೇ ತಾನು ವಿಡಂಬನೆಗೆ ಒಳಗು ಮಾಡಿಕೊಳ್ಳುವ ಪ್ರಬುದ್ಧತೆಯ ಆರೋಗ್ಯಕರ ಒಳನೋಟ ದಕ್ಕಿರುವುದು ಮುಂದಿನ ಸವಾಲುಗಳನ್ನು ಹಗುರಗೊಳಿಸಬಲ್ಲದು.

❑




# ಆ ಕನಸಿನ ಬಣ್ಣಗಳು : ಸ್ತ್ರೀಪುರುಷ ಸಂಬಂಧಗಳ ವಿಕ್ಷಿಪ್ತತೆಯ ಅನಾವರಣ

● ಡಾ. ಬಿ.ಎಸ್. ಸುಮಿತ್ರಾಬಾಯಿ

ದಾಂಪತ್ಯದಲ್ಲಿನ ಅಸಾಮರಸ್ಯಗಳು, ಛಿದ್ರಗಳೂ ಬಹುಶಃ ಕುಟುಂಬ-ವಿವಾಹ ಸಂಸ್ಥೆಗಳು ಹುಟ್ಟಿದಂದಿನಿಂದಲೂ ಇದ್ದಂಥವೇ. ಆದರೆ ವರ್ತಮಾನದಲ್ಲಿ ಬಂಡವಾಳ ಮತ್ತು ಲಾಭದ ಆರ್ಥಿಕ ವ್ಯವಸ್ಥೆ ವ್ಯಕ್ತಿಗಳ ಬದುಕಿನ ಯಾವ ಕ್ಷೇತ್ರವನ್ನೂ ಬಿಡದಂತೆ ನುಗ್ಗುತ್ತಿದೆ. ಹಾಗಾಗಿ ಗಂಡು-ಹೆಣ್ಣಿನ ಸಂಬಂಧಗಳು ಪ್ರೀತಿ, ಲೈಂಗಿಕ ಸಂತೃಪ್ತಿ ಮತ್ತು ಅಂತಃಕರಣ ತುಂಬಿದ ಸಾಹಚರ್ಯವಾಗಿರಬೇಕು ಎಂದ 'ಸುಖೀಸಂಸಾರ'ದ ಕಲ್ಪನೆ ಈಗ ಕೇವಲ ಕನಸಾದಂತೆ ಕಾಣುತ್ತಿದೆ. ಪ್ರೀತಿಯ ಆರ್ದ್ರತೆಯು ಭಾವಗಳಿಗೆ ತರಬಹುದಾದ ಬಣ್ಣಗಳ ಕನಸಿದು. ಪ್ರಸುತ ಹಾಲ್ಕುರಿಕೆ ಶಿವಶಂಕರ್ ಅವರ 'ಆ ಕನಸಿನ ಬಣ್ಣಗಳು' ನಾಟಕವು ಬಣ್ಣಗೆಡುತ್ತಿರುವ ಇಂಥ ಕೌಟುಂಬಿಕ ಸಂಬಂಧಗಳನ್ನು ರಂಗದ ಕೇಂದ್ರಕ್ಕೆ ತರುವ ಮೂಲಕ ದೇಶದ, ಸಮಾಜದ ಈ ವ್ಯಕ್ತಿಗಳ ಮನೋರೋಗಕ್ಕೆ ಮನಶ್ಶಾಸ್ತ್ರೀಯ ರೀತಿಯಿಂದ ಪರಿಹಾರ ಸಾಧ್ಯವೆ ಎಂದು ಹುಡುಕುವ ಅಪರೂಪದ ಯತ್ನಮಾಡುತ್ತದೆ.

ವರ್ತಮಾನದಲ್ಲಿಯೇ ಈ ಸಮಸ್ಯೆ ಉಲ್ಬಣಿಸಿದಂತೆ ತೋರುತ್ತಿದ್ದರೆ ಅದಕ್ಕೆ ಹೆಣ್ಣೂ ತನ್ನ ಇಚ್ಛಾನಿಚ್ಛೆಗಳನ್ನು, ಆಸ್ಥೆ, ಆಯ್ಕೆಗಳನ್ನು ಬಾಯಿಬಿಟ್ಟು ಹೇಳಲು ಕಲಿತಿದ್ದಾಳೆ ಎಂಬುದು ಗಂಡಿನ ಮನದಲ್ಲಿ ತನ್ನ ಪುರುಷಾಧಿಪತ್ಯದ ಕಾಲವಿನ್ನು ಮುಗಿಯಿತು ಎಂಬ ಭೀತಿಯನ್ನು ಹುಟ್ಟಿಸಿದೆ ಎಂಬುದೇ ಮುಖ್ಯಕಾರಣ. 'ಬಾಯಿಮುಚ್ಚಿಕೊಂಡು ಬಿದ್ದಿರು' ಎಂಬ ಪುರುಷನ ಅಂಕೆಯನ್ನು ಹೆಣ್ಣು ಪ್ರಶ್ನಿಸದೆ ಉಳಿದಿದ್ದವರೆಗೂ, ಪುರುಷಾನುಕೂಲವೇ 'ಅನುಕೂಲದಾಂಪತ್ಯ'ವೆನ್ನಿಸುತ್ತಿದ್ದು, ತಮ್ಮ 'ಇಚ್ಛೆಯನರಿವ ಸತಿ' ಸಿಕ್ಕರೆ 'ಸ್ವರ್ಗಕ್ಕೆ ಕಿಚ್ಚು ಹಚ್ಚಲೂ' ಅವರು ಸಿದ್ಧವಿದ್ದರು. ಆದರೆ ಶಿಕ್ಷಣದಿಂದ ಅರಳಿದ ಮಾನಸಿಕ ವ್ಯಕ್ತಿತ್ವ, ಉದ್ಯೋಗದಿಂದ ವಿಸ್ತರಿಸಿದ ಅನುಭವ ಮತ್ತು ವ್ಯಕ್ತಿ ಅಸ್ಮಿತೆಯ ಪ್ರಜ್ಞೆಗಳುಳ್ಳ ಮಹಿಳೆ ಪುರುಷನ ಸರಿಸಾಟಿಯಾಗಿ ತನ್ನನ್ನು ಗುರುತಿಸಿಕೊಳ್ಳಲು ಸಮರ್ಥಳಾಗಿರುವುದೇ ಸಾಂಸಾರಿಕ ಸಂಬಂಧಗಳು ಬಿಗಡಾಯಿಸುತ್ತಿರುವುದಕ್ಕೆ ಒಂದು ಮುಖ್ಯ ಕಾರಣ.

ಮೂಲಭೂತವಾದಿ ಮನಸ್ಸುಗಳು ಈ ಬಿಗಡಾಯಿಸಿದ ಪರಿಸ್ಥಿತಿಯನ್ನು ಕುಟುಂಬವನ್ನೇ ನಾಶಪಡಿಸುತ್ತದೆಂಬ ಆತಂಕದಿಂದ ನೋಡುತ್ತ, ಹೆಣ್ಣಿನ ಶಿಕ್ಷಣ, ಆರ್ಥಿಕಾದಿ ಸ್ವಾತಂತ್ರ್ಯಗಳನ್ನೇ ಮೊಟಕುಮಾಡಿ ಯಾವುದೋ ಗತಕಾಲದ ಸ್ತ್ರೀಧರ್ಮದ ಗೋಡೆಗಳೊಳಕ್ಕೇ ಅವಳನ್ನು ಮತ್ತೆ ದೂಡಿಬಿಡುವಂತೆ ಜನರನ್ನು ಪ್ರಚೋದಿಸುವ ವಿಷವೃಕ್ಷದ ಕವಲುಗಳನ್ನು ಹಬ್ಬಿಸುತ್ತಿರುವ ಇಂದಿನ ಸಾಂಸ್ಕೃತಿಕ ಪರಿಸರದಲ್ಲಿ ಶಿವಶಂಕರ್ ನಿಜವಾದ ಆರೋಗ್ಯಪೂರ್ಣ ನಿಲುವಿನಿಂದ ಗಂಡು-ಹೆಣ್ಣುಗಳೆಂಬ ವ್ಯಕ್ತಿಗಳ ಮಾನಸಿಕ ಪಲ್ಲಟಗಳ ರೋಗಗ್ರಸ್ತ ಅವಸ್ಥೆಗಳನ್ನು ಶೋಧಿಸಲು, ಮನಶ್ಶಾಸ್ತ್ರದ ಮೂಲಕ ಪರಿಹಾರವನ್ನೂ ಹುಡುಕಲು ಯತ್ನಿಸಿರುವುದು ನಿಜಕ್ಕೂ ಪ್ರಶಂಸಿಸಬೇಕಾದ ಸಂಗತಿಯಾಗಿದೆ.

ಪ್ರಸ್ತುತ 'ಆ ಕನಸಿನ ಬಣ್ಣಗಳು' ನಾಟಕದಲ್ಲಿ ಹತ್ತು ದೃಶ್ಯಗಳಿವೆ. ಅವುಗಳಲ್ಲಿ ಮೂರು ದೃಶ್ಯಗಳು ದಾಂಪತ್ಯ ಜೀವನದ ಮೂರು ಮಾದರಿಗಳನ್ನು ಶೋಧಿಸಲು ಯತ್ನಿಸುತ್ತವೆ. ಮೊದಲ ಜೋಡಿ ಪ್ರತಾಪ್-ಪವಿತ್ರರದು. ಹೆಂಡತಿ ಸದಾ ಕಲ್ಪನೆ, ಭ್ರಮೆಗಳಲ್ಲೇ ತೇಲುವವಳೆಂದೂ,ಅವಳ ಈ ವರ್ತನೆಯೇ ಆಘಾತಕಾರಿಯೆಂದೂ ರೂಪಿಸುವ ಪ್ರತಾಪ್, ಕೇವಲ ವ್ಯಾಪಾರ, ವ್ಯವಹಾರಗಳಲ್ಲೇ ಮುಳುಗಿರುವವ, ಅದರಾಚೆಗೆ ತನ್ನ ಹೃದಯದ ಭಾವನೆಗಳಿಗೆ ಸ್ಪಂದಿಸಬಲ್ಲ ಹೃದಯವೇ ಇಲ್ಲದವನೆನ್ನುವುದು ಪವಿತ್ರಳ ಅಳಲು. ಅವರು ನಡೆಸುವುದು ಸಂಭಾಷಣೆಯ ಹಾಗಿದ್ದರೂ ಸ್ವಗತಗಳೂ ಆಗಿವೆ:

*ಉದಾಹರಣೆಗೆ :*

ಪ್ರತಾಪ್ : ಇದು ಸಂಸಾರ...
ಆಘಾತಕಾರಿ... ಆಘಾತಕಾರಿ
ನನ್ನನ್ನು ಬಿಟ್ಟು ಊಟಮಾಡುವುದು
ಸಿನಿಮಾ ನೋಡುವಾಗ
ನನ್ನನ್ನೇ ಮರೆತುಬಿಡುವುದು
ನನಗೆ ಗೊತ್ತಿಲ್ಲದ್ದನ್ನು
ತಿಳಿದುಕೊಂಡು
ದಡ್ಡನನ್ನ ಮಾಡಿಬಿಡುವುದು
..........................
ಗಾನದಲ್ಲಿ
ಅರಳುವ ಲಯದಲ್ಲಿ
ಲೀನವಾಗಿಬಿಡುವುದು
ಆಘಾತಕಾರಿ....

ಪವಿತ್ರ : ಭ್ರಮೆಯೊಳಗಿರುವ ಕನಸುಗಳು
ನನ್ನ ನೆತ್ತಿಯೊಳಗೆ ಝೇಂಕರಿಸುತ್ತಿವೆ
ರಾತ್ರಿಯ ಬಣ್ಣಗಳು ಹಗಲಿನಲ್ಲಿ ಬಳಲುತ್ತಿವೆ.
ಹಗಲಿನ ಚೋದ್ಯಗಳೇ ಮನಸ್ಸನ್ನು ಕಮರುವ
ವೇಗದಲ್ಲಿ
ಸಿಡಿಯುತ್ತಿವೆ
ಅಯ್ಯೋ

ಮತ್ತೊಂದು ಮಾದರಿ ಕೇಶವ್-ಜಲಜರದು. ಮಹಿಳೆಯರ

**ಆ ಕನಸಿನ ಬಣ್ಣಗಳು**
ಲೇ : ಹಾಲ್ಕುರಿಕೆ ಶಿವಶಂಕರ್
ಪ್ರ : ಅಂಕ ಪ್ರಕಾಶನ
ಪುಟ : 102
ಬೆಲೆ : ರೂ. 65/-



ಸಂಕಟಗಳೆಲ್ಲ ದೇಶದ ಸಮಸ್ಯೆಗಳೇ ಎಂದು ನಂಬುವ ಬುದ್ಧಿಜೀವಿ ಕೇಶವ್ ದೇಶದ ಸಮಸ್ಯೆಗಳ ಬಗ್ಗೆ ತೀವ್ರವಾಗಿ, ತಾತ್ತ್ವಿಕವಾಗಿ ನಿರಂತರ ಮಾತನಾಡುವವ. ಆದರೆ ಅವನ ಹೆಂಡತಿ ಜಲಜಳಿಗೆ ಇದೆಲ್ಲ ಬೊಗಳೆ, ಮಾತುಗಳಷ್ಟೆ ಹಸಿವನ್ನು ಹಿಂಗಿಸಲಾರವು, ಅದಕ್ಕೆ ಅನ್ನವೇಬೇಕು, ಅದನ್ನು ಗಳಿಸಲಿಕ್ಕಾಗಿ ಮನುಷ್ಯ ದುಡಿಯಬೇಕು ಎಂಬ ನಂಬಿಕೆ. ಅವರ ಮಾತುಗಳು ವಾಗ್ವಾದವಾಗಿ ಹೋಗಿ ಅತಿರೇಕಕ್ಕೆ ಹೋಗಿ ಕೋಪದಲ್ಲಿ ಜಲಜ ಗಂಡನ ಕೆನ್ನೆಗೆ ಬಾರಿಸಿಯೂ ಬಿಡುತ್ತಾಳೆ. ಮೊದಲು ಅವಾಕ್ಕಾದರೂ ಮತ್ತೆ ಸಾವರಿಸಿಕೊಂಡು ಆ ತತ್ತ್ವಜೀವಿ ಹೇಳುತ್ತಾನೆ,

**ಕೇಶವ್ :** **ನೋಡು ಈ ದೇಶದ ಮಹಿಳೆಯರು**
**ಗಂಡಸರ ಕೆನ್ನೆಗೆ ಹೊಡೆಯಲು ಇನ್ನೂ ಪೂರ್ವ**
**ಸಿದ್ಧತೆಯ ಅವಶ್ಯಕತೆ ಇದೆ**
**ಕ್ರಾಂತಿಗೆ ಒಂದು ಶಿಸ್ತು ಇರಬೇಕು**
**ತತ್ವರಹಿತ ಕ್ರಾಂತಿಗಳಿಂದ**
**ಈ ಕಾಯಿಲೆ ವಾಸಿಯಾಗುವುದಿಲ್ಲ.**

ಮೂರನೆಯ ಮಾದರಿಯೊಂದನ್ನೂ ಲೇಖಕರು ಶೋಧನೆಗಾಗಿ ಸೃಷ್ಟಿಸುತ್ತಾರೆ. ಆಗರ್ಭ ಶ್ರೀಮಂತನನ್ನು ಮದುವೆಯಾದ ಹೆಣ್ಣು ಲಕ್ಷ್ಮೀ ಆರಂಭದ ಪ್ರೀತಿಯ ಸಂಭ್ರಮವೇ ಸದಾ ಉಳಿದಿರಲೆಂದು ಉತ್ಕಟ ಬಯಕೆ ನಿರೀಕ್ಷೆಗಳನ್ನು ಗಂಡನ ಬಗ್ಗೆ ಇರಿಸಿಕೊಂಡು ಹತಾಶೆ ಅನುಭವಿಸುವವಳು. ಅವಳ ಗಂಡ ಹಣದ ಸೊಕ್ಕಿನವನು, ಏನನ್ನು ಬೇಕಾದರೂ ಕೊಂಡುಕೊಳ್ಳಬಲ್ಲೆನೆಂಬ ಧಿಮಾಕಿನವನು. ಲಂಡನ್, ಅಮೆರಿಕಾ, ಸಿಂಗಪೂರ್, ಮಲೇಷಿಯಾ ಎಂದು ವ್ಯವಹಾರಕ್ಕಾಗಿ ಸದಾ ಜಾಗತಿಕವಾಗಿ ತಿರುಗಾಡುವ ಅವನಿಗೆ ಒಂದೊಂದು ಊರಿನಲ್ಲೂ ಹೆಣ್ಣುಗಳೊಂದಿಗಿನ ಸೆಳೆತ. ಆಕ್ರಮಿಸಬಲ್ಲ ಭೋಗಕಾರಿಯ ಹುಡುಕಾಟಗಳಲ್ಲಿ ಹೆಂಡತಿಯ ಬಗ್ಗೆ ಯಾವ ಮೋಹವೂ ಉಳಿದಿಲ್ಲ. ತನ್ನ ಪರಿಸ್ಥಿತಿಯನ್ನು ಕುರಿತು ವಿಚಾರಮಾಡಬಲ್ಲ ಲಕ್ಷ್ಮಿಯ ಮನೋಪಲ್ಲಟ ಕುತೂಹಲದ್ದು:

**ಲಕ್ಷ್ಮೀ :** **ಗಂಡ ಅನ್ನಿಸಿಕೊಂಡವನು**
**ಸ್ವೇಚ್ಛೆಯ ವೇಗದಲ್ಲಿ ಓಡುವ ಕುದುರೆ**
**ನನ್ನ ಮನಸ್ಸಿನ ಕಡೆ ತಿರುಗುವುದಕ್ಕೆ ವ್ಯವಧಾನವೇ ಇಲ್ಲ**
**ಕತ್ತಲ ಕೋಣೆಯಲ್ಲಿ ಸಿಡಿದೇಳುವ ಹೆಬ್ಬಯಕೆಗಳು**
**ಎಂಥವರನ್ನೂ ವ್ಯಭಿಚಾರಕ್ಕೆ ಇಳಿಸಿಬಿಡುತ್ತವೆ...**

ಗಂಡು-ಹೆಣ್ಣಿನ ನಡುವಿನ ಸಂಬಂಧಗಳು ರೋಗಗ್ರಸ್ತವಾಗುತ್ತಿರುವುದಕ್ಕೂ ಇಂಡಿಯಾದಲ್ಲಿ ವಾಸ್ತವಿಕದಲ್ಲಿ ಗೋಚರ ಗೊಳ್ಳುತ್ತಿರುವ ಸರಕುಗಳನ್ನು, ಹಣ, ಸಂಪತ್ತು, ನೆಲವನ್ನು ಮಾತ್ರ ಗಳಿಸಿದರೆ ಮೌಲ್ಯವುಳ್ಳ ಸಂಪನ್ನತೆ ಸಾಧ್ಯವೆಂಬ ತೀರದ ದಾಹವು ಇಡೀ ದೇಶದ ಜನತೆಯನ್ನು ಕಬಳಿಸುತ್ತಿರುವುದಕ್ಕೂ ಸಂಬಂಧವಿದೆ ಎಂಬುದನ್ನು ಸ್ಥಾಪಿಸಲು ಶಿವಶಂಕರ್ ಡಾ. ನಿರಂಜನ ಎಂಬ ಮನೋವೈದ್ಯನ ಪಾತ್ರವನ್ನು, ಆನಂದ್ ಎಂಬ ಮಾಜಿ ಸೈನ್ಯಾಧಿಕಾರಿಯ ಪಾತ್ರ ವನ್ನೂ ಪೇಷಂಟ್ ಎಂಬ ರೋಗಗ್ರಸ್ತವ್ಯಕ್ತಿಯನ್ನೂ ಸೃಷ್ಟಿಸುತ್ತಾರೆ.

**ಪೇಷಂಟ್ :** **ಸ್ಖಲಿಸುವ ಬಯಕೆಗಳನ್ನು**
**ಹೊತ್ತು ತಿರುಗುವ ಕುದುರೆ ನಾವು**
**ಕಾಣುವ ವಸ್ತುಗಳೆಲ್ಲವೂ ರೋಚಕತೆಯನ್ನೂ**
**ಬೋಧಿಸುತ್ತಿವೆ**
**ನನ್ನೊಳಗಿನ ಲಗಾಮುಗಳು**
**ಹರಿದುಕೊಂಡು**
**ಹಣದ ಹಿಂದೆ ಓಡುತ್ತಿವೆ**

**ಆದರೆ**
**ರಾತ್ರಿಗಳು ನನ್ನ ಒಲುಮೆಯ**
**ಕ್ಷಣಗಳಾಗುವುದಿಲ್ಲ**
**ನನ್ನ ದೇಹವೇ ನಿದ್ರೆಯನ್ನು ತಬ್ಬಲು**
**ಹಂಬಲಿಸುತ್ತಿಲ್ಲ**

**ಡಾ. ನಿರಂಜನ್ :** **(ಉದ್ವೇಗಕ್ಕೆ ಒಳಗಾಗಿದ್ದಾನೆ)**
**ಹೌದು ಪ್ರತಿ ಮನುಷ್ಯನಲ್ಲಿ ಕಾಣುವ ರೋಗದ**
**ಚಿನ್ಹೆಯಲ್ಲ**
**ವಿಶೇಷವಾಗಿ ಜಾಗತಿಕ ಪ್ರಪಂಚದೊಡನೆ**
**ತೆವಳುವ**
**ಮನುಷ್ಯ ಮಾತ್ರ**
**ಈ ರೀತಿ ವರ್ತಿಸಬಲ್ಲ**
**ಇಂಥ ಮನೋರೋಗಿಯಮನಸ್ಸು**
**ಜಗತ್ತಿನ ವ್ಯಾಪಾರ ಕೇಂದ್ರವನ್ನು**
**ತನ್ನ ಹೃದಯಕ್ಕಿಂತಲೂ**
**ಕಿರಿದು ಮಾಡಿಕೊಂಡು**
**ಮೆದುಳ ನರಗಳಲ್ಲಿ ಸೇರಿಸಿಕೊಳ್ಳಬೇಕೆಂಬ**
**ಹಠ ಇರುತ್ತದೆ.**

ಗಂಡಸರು ತಮ್ಮೊಳಗೆ ಹರಟೆ ಹೊಡೆಯುವ ದೃಶ್ಯ, ಹೆಂಗಸರೆಲ್ಲ ಒಟ್ಟಾಗಿ ಗೋಳನ್ನು ವಿನಿಮಯ ಮಾಡಿಕೊಳ್ಳುವ ದೃಶ್ಯಗಳ ಮೂಲಕ ಈ ಸಮಸ್ಯೆಯ ಇತರ ಆಯಾಮಗಳನ್ನೂ ಚರ್ಚೆಗೆ ತರಲಾಗಿದೆ. ತನ್ನ ಹೆಂಡತಿಗೆ ನಿಜವಾದ ಯಾವ ಕಷ್ಟಗಳೂ ಇಲ್ಲ, ಅವಳು ಬಯಸಿದ್ದನ್ನೆಲ್ಲ ಆಜ್ಞೆಯಂತೆ ತಾನು ತಂದೊಪ್ಪಿಸುತ್ತೇನೆ, ಶಾಪಿಂಗ್, ಹೋಟೇಲ್, ರಿಸಾರ್ಟ್ ಎಲ್ಲಾ ಕಡೆ ಖರ್ಚಿನ ಲೆಕ್ಕವಿಡದೆ ಬೆವರನ್ನು ಸುರಿಸುತ್ತೇನೆ ಸಾಲ, ಬಾಡಿಗೆ, ಸಂಸಾರದ ವೆಚ್ಚ ಸರಿದೂಗಿಸಲು 'ಕಾಲದೊಳಗೆ ಬೆವರನ್ನು ಸುರಿಸುತ್ತೇನೆ' ಆದರೂ ಅವಳು ಮಾತ್ರ ಅದ್ಯಾವುದೋ ಬಣ್ಣಗಳಲ್ಲಿ ಮುಳುಗಿರುತ್ತಾಳೆಂದು ಪ್ರತಾಪನ ದೂರು. ಅದಕ್ಕೆ ಆನಂದನ ಉತ್ತರ ಪ್ರಶ್ನೆಗಳಾಗಿ ಕೇಳುತ್ತದೆ:

**ಆನಂದ :** **ಗಂಡಸು ತನ್ನೊಳಗಿರುವ ಅಹಂಕಾರವನ್ನೇ**
**ಪ್ರೀತಿ ಎಂದು ತಿಳಿದಿರಬಹುದಾ**
**ಜೀವನದ ಕಷ್ಟಗಳನ್ನು**
**ಹೆಣ್ಣಿಗೆ ಅರ್ಪಿಸಬಹುದಾದ**
**ತ್ಯಾಗವೆಂದು ಭ್ರಮಿಸಿರಬಹುದಾ**
**ಗಂಡಿನ ಪರಾಕ್ರಮ**
**ಆಕ್ರಮಣಗಳು**
**ಹೆಣ್ಣಿಗೆ**
**ಒದಗಬಹುದಾದ**
**ದಾಳಿಯಾಗಿರಬಹುದಾ**



ಆದರೆ ಈ ಆನಂದನು ಹದಿನೈದು ವರ್ಷ ಸೈನ್ಯ ದಲ್ಲಿದ್ದವನು, ದೇಶದ ನಾಯಕರಿಗೂ ದೇಶಕ್ಕೂ ರಕ್ಷಣೆ ನೀಡುವ ಕರ್ತವ್ಯ ನಿಷ್ಠನಾಗಿದ್ದವನು. ದೇಶವೆನ್ನುವುದು ಬರೀ ಸಂಸಾರದಿಂದಲೇ ರೂಪುಗೊಂಡಿರುವುದಿಲ್ಲ, ರಕ್ಷಣೆ, ಯುದ್ಧ, ಹಿಂಸೆಯಿಂದಲೂ ರಚನೆಯಾಗಿರಬಹುದು ಎಂದು ಅವನಿಗೆ ಗೊತ್ತು. ಆರ್ಮಿಯಲ್ಲಿದ್ದಾಗ ಅವನು ಕಲಿತದ್ದು ಹಿಂಸೆಯನ್ನು, ಕೊಲ್ಲುವುದನ್ನು. ಆ ಉತ್ಸಾಹ ದಿಂದಲೇ ತನ್ನ ಹೆಂಡತಿಯ ಕತ್ತು ಹಿಸುಕಿ ಕೊಂದು ಸಂಸಾರವನ್ನು ನೀಗಿಕೊಂಡವನು. ಅವನ ಈ ಕ್ರಿಯೆ ಕೂಡ ಗಂಡು-ಹೆಣ್ಣಿನ ಸಂಬಂಧದ ಒಂದು ವಿಷನು ಬವಣೆಯ ಸ್ಥಿತಿಯಷ್ಟೇ. ಇದು 'ನನ್ನ ದೇಶ ನನಗೆ ಕಲಿಸಿದ ಪಾಠ' ಎನ್ನುತ್ತಾನೆ ಅವನು.

ದೇಶದ ಸಮಸ್ಯೆಗಳಿಗೂ ಸಂಸಾರದ ಸಮಸ್ಯೆಗಳಿಗೂ ನಿಕಟ ಸಂಬಂಧವಿರುವುದನ್ನು ಹೇಳುತ್ತಲೇ ಹೆಂಡತಿಯರ ಸಮಸ್ಯೆಗಳ ಒಳಕ್ಕೆ ಗಂಡಸರು ಇಳಿಯದೆ ಇರುವುದೇ ಹೆಣ್ಣು-ಗಂಡು ಎಂಬ ಅರ್ಥವಾಗದ ದ್ವಂದ್ವರೂಪಕಗಳ ಸೃಷ್ಟಿಯ ಮೂಲಬೇರೆಂಬ ಸೂಚನೆ ಈ ದೃಶ್ಯದಲ್ಲಿದ್ದರೆ, ಹೆಂಗಸರೇ ಸೇರಿ ನಡೆಸುವ ಚರ್ಚೆಗಳು ಮಹಿಳಾ ಚಳವಳಿಗಾರರು ಹೇಳುವ Testimonial ಮಾದರಿಯ ಗೋಳಿನ ವಿನಿಮಯದ ರಾಜಕೀಯದತ್ತ ಗಮನ ಸೆಳೆಯುವಂತಿದೆ.

: **'ಹೌದು ಹೆಣ್ಣುಗಳು ಪರಸ್ಪರ ಸೇರುವುದೇ**<br>**ತಮ್ಮೊಳಗಿರುವುದನ್ನು ಕೆಟ್ಟರಾಗಗಳಲ್ಲಿ**<br>**ಆಲಾಪಿಸಿಕೊಳ್ಳಲು**<br>**ಮನಸ್ಸು ಹಗುರಾದ ಮೇಲೆ**<br>**ನಗುತ್ತಾ ಮರಳುವುದಕ್ಕೆ**

ಎನ್ನುವ ಪವಿತ್ರಳ ಮಾತನ್ನು ನಿಜವಾಗಿಸುವಂತೆಯೇ ಜಲಜಳ ಮಾತಿದೆ:

**ಜಲಜ : ನಾನು ಸುಖವಾಗಿಲ್ಲ**<br>**ದರಿದ್ರ ಗಂಡ**<br>**ಸೋಗಲಾಡಿತನವನ್ನೇ**


ರಂಗ ಪ್ರಯೋಗದಲ್ಲಿ....

**ಉದ್ಯೋಗ ಮಾಡಿಕೊಂಡಿದ್ದಾನೆ**<br>**ಆದರೂ**<br>**ಬುದ್ಧಿವಂತನೇ.**<br>**ದೇಶ**<br>**ಸಮಾಜ**<br>**ಅಂತ ಏನೇನೋ ಹೇಳ್ತಾನೆ**<br>**ನನ್ನ ಬಗ್ಗೆ**<br>**ನನ್ನ ಮಾತಿನ ಬಗ್ಗೆ**<br>**ನಿಗಾವಹಿಸುವುದೇ ಇಲ್ಲ**

ಆನಂದನ ಜೊತೆ ಪವಿತ್ರ-ಜಲಜ ಮುಖಾಮುಖಿಯಾಗುವ ಒಂಬತ್ತನೆಯ ದೃಶ್ಯ ತುಂಬ ಕುತೂಹಲಕಾರಿ. **'ನಾನು ಹುಡುಕುತ್ತಿರುವ/ ಬಣ್ಣಗಳು/ನನ್ನ ಗಂಡನಾಗಲಿ/ಹೆಣ್ಣು ಗಂಡಿನೊಳಗಿರುವ/ಬಣ್ಣಗಳು ಪ್ರೀತಿಯ ಅಣುವಾಗಲಿ/ಆ ಪ್ರೀತಿಯ ಕಣಕಣದಲ್ಲಿ ಭಾವನೆಗಳು/ ಬಣ್ಣಗಳು ಪ್ರಖರಗೊಳ್ಳಲಿ'** ಎಂದು ತಾನು, ತನ್ನ ಗಂಡ ಇಬ್ಬರೇ ಇರುವ ಆದರ್ಶದ ಸಂಸಾರದ ಕನಸನ್ನು ಭಾವತೀವ್ರತೆಯಿಂದ ಪವಿತ್ರ ಹೇಳಿದರೆ ಆನಂದ **'ನನ್ನಲ್ಲಿಗೆ ನೀವು ಯಾಕೆ/ಬಂದಿದ್ದೀರಾ/ಈಗಲೂ ಗೊತ್ತಾಗುತ್ತಿಲ್ಲ'** ವೆನ್ನುತ್ತಾನೆ. **'ನಮ್ಮ ಸಂಸಾರದ/ಕೊನೆಯ ಸತ್ಯವನ್ನು ಹುಡುಕಲು,' 'ಮಿಂಚಿಹೋಗುವ ಬಣ್ಣಗಳನ್ನು ಹಿಡಿಯುವುದಕ್ಕೆ'** ಎನ್ನುವ ಪವಿತ್ರ ಹಾಗೂ ಜಲಜರ ಹುಡುಕಾಟಗಳ ಮೂಲಕ ಹೊಮ್ಮುವ ತಾತ್ಪರ್ಯವಿಷ್ಟು: ದೇಶದ ರಕ್ಷಣೆಯ ಹೆಸರಲ್ಲಿ ಆಜ್ಞೆಗಳ ನಿರ್ಬಂಧಗಳಲ್ಲಿ ದೇಶವು ಹಿಂಸೆಯನ್ನೇ ಪೋಷಿಸು ವಂಥದು. ಅಷ್ಟೇ ಆಜ್ಞೆಗಳ ನಿರ್ಬಂಧಗಳಲ್ಲಿ ಬಿಗಿದುಕೊಂಡಿರುವ ಹೆಣ್ಣು ಹುಡುಕುವ ಆಳಿಸಲಾರದ ಬಣ್ಣಗಳು ರಕ್ತದ, ಹಿಂಸೆಯ ಸರಣಿಯನ್ನು ಕರಗಿಸಬಲ್ಲದಷ್ಟೇ ಅಲ್ಲ, ಆ ಬಣ್ಣಗಳಲ್ಲಿಯೇ ಗಂಡಿನ ಹೆಣ್ಣಿನ ಬಿಡುಗಡೆಯೂ ಹುದುಗಿದೆ ಎಂಬುದನ್ನು ಗಂಡು ಅರ್ಥಮಾಡಿಕೊಳ್ಳಬೇಕಿದೆ.

ಕೊನೆಯ ದೃಶ್ಯದಲ್ಲಿ ಡಾ. ನಿರಂಜನ್ ಸಂಮೋಹನಗೊಳಿಸಿ ತನ್ನ ಪೇಷಂಟನ್ನು ಮನೋವಿಪ್ಲವಗಳಿಂದ ಹೊರಕ್ಕೆ ಕರೆತರಲು ಪ್ರಯೋಗ ನಡೆಸುವಾಗ ಸಂಚಾರಿ ಎಂಬ ಮಾತಿಲ್ಲದ ಪಾತ್ರವೊಂದು ಪೇಷಂಟ್‌ನ ಹತ್ತಿರ ಹೋಗಿ 'ಅಹಿಂಸೆ' 'ಶಾಂತಿ' ಎಂಬ ಬೋರ್ಡ್‌ಗಳನ್ನು ಮೌನವಾಗಿ ನೇತುಹಾಕುವ ಕ್ರಿಯೆ ನಡೆಸುತ್ತದೆ. ಕೇಶವ, ಜಲಜ ಸೊಂಟಕ್ಕೆ ದಾರವನ್ನು ಕಟ್ಟಿಕೊಂಡಿರುವ ಚಿತ್ರವೂ ಎದುರಾಗುತ್ತದೆ. ಸಂಸಾರದ ಈ ದಾರವನ್ನು ಅವರಿಬ್ಬರೂ ತಮ್ಮ ಮನಕ್ಕೆ ತಕ್ಕಂತೆ ಎಳೆದಾಡುತ್ತಾರೆ. ಡಾ. ನಿರಂಜನರ ಚಿಕಿತ್ಸೆಯ ಮಾತುಗಳೂ **'ಒಂದು ದೇಶದ ಸಾಮಾಜಿಕ/ಅರಾಜಕತೆಯೆ/ ಆದೇಶದ ಮನೋವ್ಯಾಧಿಯೂ/ಕೂಡ ಆಗಿರುತ್ತದೆ'** ಎಂಬುದನ್ನು ಹೇಳುತ್ತವೆ. ಈ ಚಿಕಿತ್ಸೆಯ ದೃಶ್ಯದ ಕೊನೆಗೆ ಎಲ್ಲ ಗಂಡುಗಳೂ **'ಹೌದು/ನಾನು ನನ್ನ ಹೆಂಡತಿಯನ್ನು/ಬಂಧನದಲ್ಲಿಟ್ಟು/ಖುಷಿಯನ್ನನು ಭವಿಸುತ್ತಿರುವವನು'** ಎಂಬುದನ್ನು ಒಪ್ಪುತ್ತವೆ. ಪುರುಷಾಧಿಪತ್ಯವು ಆಧುನಿಕ ಸಂಸಾರದ ಒಳಗೂ ಮುಂದುವರೆದಿರುವುದನ್ನು ಸಂಕೇತಿಸುವವರು ಇಲ್ಲಿನ ಗಂಡಸರು; ಸಂಸಾರದ ಈ ಬಂಧನಕಾರಿ ವ್ಯವಸ್ಥೆಯಿಂದ ಹೊರಬರಲು ಭಾವನೆಗಳ ಮೂಲಕ ಹುಡುಕಾಡುವವರು ಇಲ್ಲಿನ ಹೆಂಗಸರು. ಸಂಸಾರ ಸಂಬಂಧಗಳ ಒಳಾರ್ಥ ಗಳನ್ನು ಶೋಧಿಸುತ್ತಾ ಹೋದಂತೆ ಪ್ರೀತಿಯ ಒರತೆಯನ್ನೇ ಬತ್ತಲು ಅವಕಾಶಮಾಡಿಕೊಟ್ಟು, ಶುಷ್ಕತೆಯನ್ನೇ ಸಂಬಂಧಗಳೆಂದು ಜೋತುಬಿದ್ದು ಕೊಂಡಿರುವ 'ಕುಟುಂಬ' ವ್ಯವಸ್ಥೆಯ ದುರಂತ ಇಲ್ಲಿ ಬೆಳಕಿಗೆ ಬರುತ್ತದೆ. ಈ ರೀತಿ ವರ್ತಮಾನದ ಮಾನವ ಸಂಬಂಧಗಳು ವಿಕ್ಷಿಪ್ತತೆಯ ಕಡೆಗೆ ಸಾಗುತ್ತಿರುವುದರ ಮಾರ್ಮಿಕ ವಿಶ್ಲೇಷಣೆಯುಳ್ಳ ಮಹತ್ವಪೂರ್ಣ ಕೃತಿ ಇದಾಗಿದೆ. ❑



# ರಾಜಕೀಯ ಮತ್ತು ಮಹಿಳೆ

■ ಎಸ್. ಮಾಲತಿ, ಸಾಗರ

ಭಾರತದ ರಾಜಕೀಯ ಬಹಳ ವರ್ಷಗಳಿಂದ ಪುರುಷ ಕೇಂದ್ರಿತವೇ ಆಗಿದೆ. ರಾಜಕೀಯದಲ್ಲಿ ಪ್ರಾತಿನಿಧ್ಯ ಸಿಗದೆ, ಪಕ್ಷಗಳಲ್ಲಿ ಪ್ರಾಧಾನ್ಯ ಸಿಗದೆ, ಮಹಿಳೆಯರು ಹಿನ್ನೆಲೆಯಲ್ಲಿಯೇ ಉಳಿದಿದ್ದಾರೆ. ಪಕ್ಷಗಳ ಕಾರ್ಯಕರ್ತೆಯರಿಗೂ ಹಲವು ಬಾರಿ ಕೇವಲ ಮಹಿಳೆಯರಿಗೆ ಸಂಬಂಧಪಟ್ಟ ವಿಷಯಗಳನ್ನು ಪರಿಹರಿಸುವ ಕೆಲಸವನ್ನು ಕೊಡುತ್ತಾರೆ. ಆದರೆ, ಪಕ್ಷಗಳ ಮುಂಚೂಣಿಯಲ್ಲಿರುವ ಪುರುಷ ರಾಜಕಾರಣಿಗಳಿಗೆ ಮಹಿಳಾ ಸಂಬಂಧಿತ ಪ್ರಶ್ನೆಗಳು ಮುಖ್ಯವೆನ್ನಿಸದೆ ಇರುವುದರಿಂದ, ಯಾವ ಪಕ್ಷದ ಮಹಿಳಾ ಕಾರ್ಯಕರ್ತೆಯರಿಗೂ ರಾಜಕೀಯದಲ್ಲಿ ಪ್ರಮುಖ ಸ್ಥಾನವನ್ನೇರಲು ಸಾಧ್ಯವಾಗುವುದಿಲ್ಲ. ಸರ್ಕಾರದ ಅಥವಾ ಪಕ್ಷಗಳ ಯಾವ ನೀತಿ–ನಿರ್ಧಾರಗಳನ್ನೂ ಪ್ರಭಾವಿಸುವ ಅವಕಾಶವೂ ಮಹಿಳೆಯರಿಗೆ ಇಲ್ಲವೆಂದೇ ಹೇಳಬೇಕಾಗುತ್ತದೆ. ಇದೆಲ್ಲ ಹೇಳುವಾಗ ಥಟ್ಟನೆ ನೆನಪಾಗುವುದು, ದೇಶದ ಪ್ರಧಾನಮಂತ್ರಿಯಾಗಿ ಇಡೀ ಪ್ರಪಂಚದ ಗಮನ ಸೆಳೆದ ಶ್ರೀಮತಿ ಇಂದಿರಾಗಾಂಧಿಯವರ ಹೆಸರು. ಆದರೆ, ಆಕೆ ಸಾಮಾನ್ಯ ಹೆಂಗಸಾಗಿ ರಾಜಕೀಯದಲ್ಲಿ ಮೇಲೇರಿದವಳಲ್ಲ. ದೇಶದ ಪ್ರಥಮ ಪ್ರಧಾನಿ ಜವಹರಲಾಲ ನೆಹರೂರವರ ಪುತ್ರಿಯಾಗಿದ್ದು, ಶ್ರೀಮಂತ ಕುಟುಂಬದಿಂದ ಬಂದವಳಾಗಿದ್ದಳು. ಈಕೆಯ ರಾಜಕೀಯವನ್ನು ಜನಮುಖಿ ರಾಜಕೀಯವೆನ್ನಬಹುದೇ? ಎಂಬುದೇ ಪ್ರಶ್ನೆ. 1975ರಲ್ಲಿ ದೇಶದಲ್ಲಿ ತುರ್ತುಪರಿಸ್ಥಿತಿ ಹೇರಿ, ಕರಾಳ ಮುಖ ತೋರಿದ್ದನ್ನು ಇಂದಿಗೂ ಮರೆಯಲಾಗುತ್ತಿಲ್ಲ.

ಇನ್ನು ನೆನಪಾಗುವುದು ತಮಿಳುನಾಡಿನ ಜಯಲಲಿತ ಮತ್ತು ಪಶ್ಚಿಮ ಬಂಗಾಳದ ಮಮತಾ ಬ್ಯಾನರ್ಜಿ ಮತ್ತು ಮಧ್ಯಪ್ರದೇಶದ ಮಾಯಾವತಿ. ಇವರೆಲ್ಲ ಪ್ರಾದೇಶಿಕ ಪಕ್ಷಗಳನ್ನು ಕಟ್ಟಿದವರು. ಆದರೆ, ಗಂಡು ರಾಜಕಾರಣಿಗಳಿಗಿಂತ ಯಾವ ರೀತಿಯಿಂದಲೂ ಭಿನ್ನವಾಗಿರದೆ, ಭ್ರಷ್ಟಾಚಾರದ ಬಲೆಯಲ್ಲಿ ಸಿಕ್ಕು ಕೋಟಿಗಟ್ಟಲೆ ಆಸ್ತಿ ಮಾಡಿದವರು. ಇವರಲ್ಲಿ ಮಮತಾಬ್ಯಾನರ್ಜಿ ಅಷ್ಟೇನೂ ಭ್ರಷ್ಟಳಲ್ಲ ಎಂದು ಹೇಳಬಹುದು. ಹೀಗೆಯೇ ಸೋನಿಯಾಗಾಂಧಿಯೂ ಗಂಡುರಾಜಕಾರಣಿಗಳ ಕೈಗೊಂಬೆಯಾದರೂ ಭ್ರಷ್ಟಳಲ್ಲ ಎಂದು ತೋರುತ್ತದೆ.

2008ರ ವಿಶ್ವಸಂಸ್ಥೆಯ ಸರ್ವೆಯ ಪ್ರಕಾರ ಭಾರತದ ಸಂಸತ್ತಿನಲ್ಲಿ ಅತ್ಯಂತ ಕಡಿಮೆ ಮಹಿಳೆಯರಿದ್ದಾರೆ. 14ನೇ ಲೋಕಸಭೆಯಲ್ಲಿ ಶೇಕಡ 9.1 ಮಹಿಳೆಯರಿದ್ದರು. ಅದೇ ಸಣ್ಣದೇಶವಾದ ರುವಾಂಡದಲ್ಲಿ ಶೇಕಡ 56.7, ದಕ್ಷಿಣ ಆಫ್ರಿಕಾದಲ್ಲಿ ಶೇಕಡ 44.5, ಮೊಜಾಂಬಿಕ್‌ನಲ್ಲಿ ಶೇಕಡ 34.8 ಸ್ವಾತಂತ್ರ್ಯಾನಂತರದಲ್ಲಿ 15ನೇ ಲೋಕಸಭೆಯಲ್ಲಿ ದಾಖಲೆಯಾಗಿ 59 ಮಹಿಳೆಯರು ಪಾರ್ಲಿಮೆಂಟ್ ಸದಸ್ಯರಾಗಿದ್ದರು. ಅಂದರೆ ಶೇಕಡ 10.7. 1992ರಲ್ಲಿ 73ನೇ ತಿದ್ದುಪಡಿಯ ನಂತರ ಮೂರನೇ ಒಂದು ಭಾಗ ಮಹಿಳಾ ಮೀಸಲಾತಿ ತಂದ ನಂತರ ಗ್ರಾಮೀಣಪ್ರದೇಶಗಳ ಪಂಚಾಯತ್‌ರಾಜ್ ವ್ಯವಸ್ಥೆಯಲ್ಲಿ ಶೇಕಡ 50ರಷ್ಟು ಮಹಿಳೆಯರು ರಾಜಕೀಯ ಪ್ರವೇಶ ಮಾಡಿದ್ದಾರೆ.

ದೇಶದ ಅತಿದೊಡ್ಡ ಪಕ್ಷ ಕಾಂಗ್ರೆಸ್‌ನಲ್ಲಿ ಈವರೆಗೂ ಶೇಕಡ ಹತ್ತು ಮಹಿಳೆಯರಿಗೆ ಮಾತ್ರ ಚುನಾವಣೆಗೆ ನಿಲ್ಲಲು ಅವಕಾಶ ನೀಡಿದ್ದಾರೆ. ಭಾರತೀಯ ಜನತಾ ಪಕ್ಷದಲ್ಲಿ ಅದು ಶೇಕಡ ಏಳು, ಸಿಪಿಎಂ ಪಕ್ಷದಲ್ಲೂ ಮಹಿಳೆಯರಿಗೆ ಅವಕಾಶ ಶೇಕಡ ಏಳರಷ್ಟು. ಆದರೆ ಗ್ರಾಮೀಣ ಪ್ರದೇಶದಲ್ಲಿ ಕರ್ನಾಟಕ ರಾಜ್ಯ ಪಂಚಾಯತ್ ಬಿಲ್ 2010ನ್ನು ಕಳೆದ ರಾಜ್ಯದ ಶಾಸಕಾಂಗ ಸಭೆಯಲ್ಲಿ ಅಂಗೀಕರಿಸಿ ಶೇಕಡ 50 ಮೀಸಲಾತಿಯನ್ನು ಮಹಿಳೆಯರಿಗೆ ನೀಡಲು ನಿರ್ಧರಿಸಿದ್ದು, ಕರ್ನಾಟಕದ ಮಹಿಳೆಯರು ಹೆಚ್ಚು ಹೆಚ್ಚು (ಗ್ರಾಮೀಣ ಪ್ರದೇಶದಲ್ಲಿ) ರಾಜಕೀಯ ಪ್ರವೇಶ ಮಾಡಲು ಸಾಧ್ಯವಾಗಿದೆ.

ಸ್ತ್ರೀ ಪುರುಷರಿಗೆ ಸಮಾನ ಸ್ಥಾನವನ್ನು ನಮ್ಮ ಸಂವಿಧಾನದಲ್ಲಿ ನೀಡುವ ಮೂಲಕ ರಾಜಕೀಯ ಪ್ರಕ್ರಿಯೆಯಲ್ಲಿ ಭಾಗವಹಿಸಲು ಮಹಿಳೆಗೆ ಅವಕಾಶ ಕಲ್ಪಿಸಿಕೊಡಲಾಗಿದೆ.

ಭಾರತೀಯ ಮಹಿಳೆಯರು ಖಾಸಗಿ ಜೀವನದಿಂದ ಸಾರ್ವಜನಿಕ ಜೀವನಕ್ಕೆ ಪ್ರವೇಶಿಸಲು ಪಾಶ್ಚಾತ್ಯೀಕರಣ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಕಾರಣವಾಯಿತು. ಹಿಂದೂ ವಿಧವೆಯರ ಶೋಚನೀಯ ಬಾಳು, ಬಾಲ್ಯವಿವಾಹ, ವಿಧವಾ ಪುನರ್ವಿವಾಹಕ್ಕೆ ಇದ್ದ ನಿಷೇಧ, ಅನಕ್ಷರತೆಗಳ ಬಗ್ಗೆ ಜಾಗೃತಿ ಮೂಡಲಾರಂಭಿಸಿತು. ಭಾರತೀಯ ಗಣ್ಯರಿಗೆ ದೊರೆತ ಇಂಗ್ಲಿಷ್ ಶಿಕ್ಷಣ ಎಲ್ಲರಲ್ಲೂ ಅರಿವನ್ನು ಮೂಡಿಸಿತು.

19ನೆಯ ಶತಮಾನದುದ್ದಕ್ಕೂ ಮತ್ತು 20ನೆಯ ಶತಮಾನದ ಪ್ರಾರಂಭದಲ್ಲಿ ಆದ ಸಮಾಜ ಸುಧಾರಣೆಗಳ ಮೂಲಕ ಕಾನೂನಿನಲ್ಲಿ ಆದ ಬದಲಾವಣೆಗಳಲ್ಲಿ ಮಹಿಳೆಯರ ಸಂಘಟಿತ ಪ್ರಯತ್ನ ಕಾಣದಿದ್ದರೂ ಮಹಿಳಾ ಚಳವಳಿಯ ಪ್ರಾರಂಭಿಕ ಸೂಚನೆಗಳನ್ನು ಇಲ್ಲಿ ಗುರುತಿಸಬಹುದು.

ಭಾರತದಲ್ಲಿನ ಮಹಿಳಾ ಚಳವಳಿಯನ್ನು ಮಹಾತ್ಮಾ ಗಾಂಧೀಜಿಯವರ ರಾಷ್ಟ್ರೀಯ ರಾಜಕಾರಣದ ಅವಿಭಾಜ್ಯ ಅಂಗ ಎಂದೇ ಹೇಳಬೇಕು. ಮಹಿಳೆಯರಲ್ಲಿ ಗಾಂಧೀಜಿ ಮೂಡಿಸಿದ ರಾಷ್ಟ್ರೀಯ ಮನೋಭಾವ, ಮಹಿಳೆಯರ ಜೀವನದಲ್ಲಿ ಬದಲಾವಣೆಗಳನ್ನು ತಂದುದಷ್ಟೇ ಅಲ್ಲದೆ ಅವರನ್ನು ಕ್ರಿಯಾಶೀಲರನ್ನಾಗಿ ಮಾಡಿತು. ಸ್ವಾತಂತ್ರ್ಯ ಸಂಗ್ರಾಮದ ಈ ಹೊತ್ತಿನಲ್ಲಿ ಹಲವು ಮಹಿಳೆಯರು ಮೆರವಣಿಗೆಗಳಲ್ಲಿ ಪಾಲ್ಗೊಂಡರು, ರಾಜಕೀಯ ಸಮಾವೇಶದಲ್ಲಿ ಭಾಗವಹಿಸಿದರು, ಉಪವಾಸ ಸತ್ಯಾಗ್ರಹ ಕೈಗೊಂಡರು, ಜೈಲಿಗೂ ಹೋದರು.

ರಾಜಕಾರಣದಲ್ಲಿ ಮಹಿಳೆ ಪಾಲ್ಗೊಳ್ಳುವುದು ಎಂದರೆ ಕೇವಲ ಚುನಾವಣೆಗಳಲ್ಲಿ ಮತ್ತು ಆಡಳಿತದಲ್ಲಿ ಪಾಲ್ಗೊಳ್ಳುವುದು ಎಂದು ಸೀಮಿತ ಅರ್ಥವಲ್ಲ. ಮತ ಚಲಾವಣೆ, ರಾಜಕೀಯ ಪಕ್ಷಗಳಿಗೆ ಬೆಂಬಲ, ಶಾಸಕರೊಂದಿಗೆ ಸಂವಾದ, ರಾಜಕೀಯ ಪಕ್ಷಗಳ ಪ್ರಣಾಳಿಕೆಗಳನ್ನು ಜನರಿಗೆ ತಲುಪಿಸುವುದು ಹಾಗೂ ರಾಜಕಾರಣ ಪ್ರಕ್ರಿಯೆಯ ಮೇಲೆ ಪರಿಣಾಮ ಬೀರುವಂತಹ ಚಟುವಟಿಕೆಗಳೂ ರಾಜಕೀಯ ಚಟುವಟಿಕೆಗಳೇ. ಆದರೆ, ಸಾಂಪ್ರದಾಯಿಕ ಅರ್ಥದ ರಾಜಕಾರಣದಲ್ಲಿ ಮಹಿಳೆ ಇನ್ನೂ ಹೊರಗಿನವಳಾಗಿಯೇ ಉಳಿದಿದ್ದಾಳೆ.

ಭಾರತದಲ್ಲಿ 1937ರಲ್ಲಿ ಮಹಿಳೆಗೆ ಸೀಮಿತ ಮತದಾನದ ಹಕ್ಕನ್ನು ಕೊಡಲಾಯಿತು. ಅಂದಿನಿಂದ, ರಾಜಕೀಯದಲ್ಲಿ ಮಹಿಳೆಯ ಭಾಗವಹಿಸುವಿಕೆ ಸ್ವಲ್ಪಮಟ್ಟಿಗೆ ಅಭಿವೃದ್ಧಿಗೊಂಡಿದೆ.

ಸ್ವಾತಂತ್ರ್ಯ ಹೋರಾಟದ ಮೂಲಕ ಮುಂಚೂಣಿಗೆ ಬಂದ ಮಹಿಳೆಯರನ್ನು ಹೋರಾಟದ ನಂತರ ಮತ್ತೆ ಹಿನ್ನೆಲೆಗೆ ಸರಿಸಲಾಯಿತು. ಸಂವಿಧಾನದಲ್ಲಿ ಮೂಲಭೂತ ಹಕ್ಕುಗಳನ್ನು ಮಹಿಳೆಗೆ ಕೊಡುವ ಮೂಲಕ ಭಾರತ ಪ್ರಗತಿಪರ ರಾಷ್ಟ್ರ ಎಂದು ಕರೆಸಿಕೊಂಡರೂ, ಇದೊಂದು ಆಧುನಿಕತೆಯ ಮುಖವಾಡವಷ್ಟೇ ಆಗಿ ಉಳಿಯಿತು. ಮಹಿಳೆಯರ ದಿನನಿತ್ಯದ ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಬದುಕಿನಲ್ಲಿ ಯಾವ ಬದಲಾವಣೆಯೂ ಆಗಲಿಲ್ಲ. ಕಾನೂನಿನಲ್ಲಿ ಸ್ತ್ರೀ ಪುರುಷರ ತಾರತಮ್ಯ ಉಳಿದುಕೊಂಡೇ ಬಂತು.

ನಮ್ಮ ದೇಶದಲ್ಲಿ ಮಹಿಳಾ ಸಾಕ್ಷರತೆಯ ಪ್ರಮಾಣ ಕಡಿಮೆ ಇರುವುದರಿಂದ ಮಹಿಳೆ ರಾಜಕೀಯ ಕ್ಷೇತ್ರದಿಂದ ದೂರ ಉಳಿದಿದ್ದಾಳೆ. ಅನಕ್ಷರಸ್ಥ ಮಹಿಳೆಗೆ ತನ್ನ ಗಂಡನೋ, ಸೋದರನೋ, ಇಲ್ಲ ತಂದೆಯೋ ಹೇಳಿದ ಚಿನ್ಹೆಯ ಮುಂದೆ ಹೆಬ್ಬೆಟ್ಟು ಒತ್ತುವುದಷ್ಟೇ ಅವಳಿಗೆ ಗೊತ್ತಿರುವ ರಾಜಕೀಯ.

ಗಾಂಧೀಜಿಯವರ ನೇತೃತ್ವದ ಸ್ವಾತಂತ್ರ್ಯ ಹೋರಾಟದಲ್ಲಿ ಮಹಿಳೆ ಬಹುಮುಖ್ಯ ಪಾತ್ರವನ್ನು ವಹಿಸಿದಳು. 'ಗಾಂಧಿ ಸ್ವಾತಂತ್ರ್ಯವನ್ನು ಪಡೆಯುತ್ತಾರೋ ಇಲ್ಲವೋ, ಆದರೆ ಮಹಿಳೆಯರನ್ನು ಗೃಹಬಂಧನದಿಂದ ಬಿಡಿಸಿ ರಾಷ್ಟ್ರೀಯ ಹೋರಾಟದಲ್ಲಿ ಪರಿಣಾಮಕಾರಿ ಪಾತ್ರ ವಹಿಸುವಂತೆ ಮಾಡುವ ಅದ್ಭುತವನ್ನು ಸಾಧಿಸಿದ್ದಾರೆ' ಎಂದು ಅಮೆರಿಕಾದ ಪತ್ರಕರ್ತನೊಬ್ಬ ಉದ್ಗಾರ ತೆಗೆದನಂತೆ.

1952ರಲ್ಲಿ ನಡೆದ ಚುನಾವಣೆಗಳಲ್ಲಿ 499 ಸದಸ್ಯರ ಪೈಕಿ ಕೇವಲ 22 ಮಹಿಳೆಯರು. 1991ರಲ್ಲಿ ಸಾರ್ವತ್ರಿಕ ಚುನಾವಣೆಗಳಲ್ಲಿ 28 ಮಹಿಳೆಯರು ಲೋಕಸಭೆಗೆ ಚುನಾಯಿತರಾದರೆ, 58 ಸಚಿವರ ಪೈಕಿ 9 ಮಂದಿ ಮಹಿಳೆಯರು ಇದ್ದು, ಅವರಲ್ಲಿ ಒಬ್ಬರು ಕ್ಯಾಬಿನೆಟ್ ದರ್ಜೆಯ ಸಚಿವರಾಗಿದ್ದರು. ಮಹಿಳಾ ಪ್ರಾತಿನಿಧ್ಯದ ಸಂಖ್ಯೆ ಕಡಿಮೆಯಿದ್ದರೂ ಅತ್ಯಲ್ಪ ಅವಧಿಯಲ್ಲಿಯೇ ವರದಕ್ಷಿಣೆ ನಿಷೇಧ ವಿಧೇಯಕ, ಅನೈತಿಕ ವ್ಯವಹಾರಗಳು ಮತ್ತು ವ್ಯಭಿಚಾರದ ಮನೆಗಳ ನಿಯಂತ್ರಣ ವಿಧೇಯಕ ಮುಂತಾದ ಪ್ರಮುಖ ವಿಧೇಯಕಗಳನ್ನು ಮಂಡಿಸಲಾಯಿತು. 3ನೇ ಲೋಕಸಭೆಯ ನಂತರ ಸ್ತ್ರೀಸಂಸದರು ವಹಿಸಿದ ಪಾತ್ರ ಸ್ವಲ್ಪಮಟ್ಟಿಗೆ ಗುಣಾತ್ಮಕವಾಗಿ ಬದಲಾಯಿತು. ಇದಕ್ಕೆ ಪ್ರಧಾನಮಂತ್ರಿಯಾಗಿದ್ದ ಇಂದಿರಾಗಾಂಧಿಯವರೂ ಸ್ವಲ್ಪಮಟ್ಟಿಗೆ ಕಾರಣವೆನ್ನಬಹುದು.

ಭಾರತದಲ್ಲಿನ ಮಹಿಳಾ ಚಳವಳಿಗಳ ಬಗ್ಗೆ ಸ್ವಲ್ಪ ತಿಳಿದುಕೊಳ್ಳೋಣ. ಸ್ವಾತಂತ್ರ್ಯ ಪೂರ್ವದಲ್ಲಿ ಮಹಿಳೆಯರ ಸುಧಾರಣೆಗಾಗಿ ದುಡಿದವರಲ್ಲಿ ಹೆಚ್ಚಿನವರು ಪುರುಷರು. ರಾಜಾರಾಂ ಮೋಹನ್‌ರಾಯ್ ಅವರು 1811ರಿಂದ 1828ರ ವರೆಗೆ ಸತತವಾಗಿ 'ಸತಿ' ಪದ್ಧತಿಯ ವಿರುದ್ಧ ಹೋರಾಡಿದರು. ಇದರೊಡನೆ ಆಗ ರೂಢಿಯಲ್ಲಿದ್ದ 'ಬಹುಪತ್ನಿತ್ವ' ಪದ್ಧತಿಯನ್ನೂ ವಿರೋಧಿಸಿದರು. ಮುಂದೆ ದೇವೇಂದ್ರನಾಥ ಠಾಗೂರ್ ಅವರು ಮಹಿಳಾ ಶಿಕ್ಷಣ, ಹಿಂದೂ ವಿಧವೆಯರ ಪುನರ್ವಿವಾಹ, ಬಾಲ್ಯವಿವಾಹ ನಿವಾರಣೆ ಹಾಗೂ ಬಹುಪತ್ನಿತ್ವ ನಿಷೇಧಗಳಿಗಾಗಿ ಶ್ರಮಿಸಿದರು. ಇವರಂತೆಯೇ ಈಶ್ವರ ಚಂದ್ರ ವಿದ್ಯಾಸಾಗರ, ಸ್ವಾಮಿ ದಯಾನಂದ ಸರಸ್ವತಿ, ಕೇಶವ ಚಂದ್ರಸೇನ್, ಮಹಾದೇವ ಗೋವಿಂದ ರಾನಡೆ, ಜೋತಿಬಾಫುಲೆ, ಬೆಹರಾಮ್‌ಜಿ ಮುಬಾರಿ, ಧೋಂಡೋಕೇಶವಪಂತಕರ್ವೆ ಇವರೆಲ್ಲ ಭಾರತೀಯ ಸಮಾಜದಲ್ಲಿ ಮಹಿಳೆಗಿದ್ದ ಹೀನಸ್ಥಿತಿಯನ್ನು ಉತ್ತಮಪಡಿಸಲು ಶ್ರಮಿಸಿದವರು. ಮಹರ್ಷಿ ಎಂದೇ ಖ್ಯಾತರಾಗಿದ್ದ ಕರ್ವೆಯವರು ಸ್ವತಃ ಒಬ್ಬಳು ವಿಧವೆಯನ್ನು ವಿವಾಹವಾದರು. ಭಾರತದಲ್ಲಿ ಪ್ರಥಮ ಮಹಿಳಾ ವಿಶ್ವವಿದ್ಯಾಲಯವೆಂದು ಖ್ಯಾತವಾಗಿರುವ ಮುಂಬಯಿ ಮಹಿಳಾ ವಿಶ್ವವಿದ್ಯಾಲಯದ ಹುಟ್ಟಿಗೆ ಕರ್ವೆಯವರೇ ಕಾರಣರು. ಇದನ್ನು 1907, ಮಾರ್ಚ್ 4ರಂದು ಪುಣೆಯಲ್ಲಿ ಸ್ಥಾಪಿಸಿದರು.

ಆಂಧ್ರದ ವೀರೇಶಲಿಂಗಂ ಪಂತುಲು ಹಾಗೂ ಆರ್. ವೆಂಕಟರತ್ನಂ ನಾಯ್ಡು ಅವರು ಮಹಿಳಾ ಶಿಕ್ಷಣ, ವಿವಾಹ ಸುಧಾರಣೆ, ದೇವದಾಸಿಪದ್ಧತಿಯ ನಿಷೇಧಕ್ಕಾಗಿ ದುಡಿದರು. ವೀರೇಶಲಿಂಗಂ ಅವರು 1878ರಲ್ಲಿ ವಿಧವಾ ವಿವಾಹ ಸಂಸ್ಥೆಯನ್ನು ಸ್ಥಾಪಿಸಿದರು. ಇವರೆಲ್ಲರ ಹೋರಾಟದ ಫಲವಾಗಿ, ಆಗಿನ ಬ್ರಿಟಿಷ್ ಸರ್ಕಾರವೂ ಕೆಲವು ಮಹಿಳಾಪರ ಕಾನೂನುಗಳನ್ನು ಜಾರಿಗೆ ತಂದಿತು.

ಇದೆಲ್ಲದರ ಪರಿಣಾಮವಾಗಿ ಮಹಿಳೆಯರು ಸಂಘಟಿತರಾಗಿ ತಮ್ಮ ವಿಮೋಚನೆಗಾಗಿ ಹೋರಾಟ ನಡೆಸಿದ್ದನ್ನು 19ನೆಯ ಶತಮಾನದಲ್ಲಿ ಕಾಣಬಹುದು.

ಸ್ವರ್ಣಕುಮಾರಿ ದೇಬಿ, ಪಂಡಿತರಮಾ ಬಾಯಿ, ರಮಾಬಾಯಿ ರಾನಡೆ, ಆನಂದಿ ಬಾಯಿ ಜೋಶಿ, ಫ್ರಾನ್ಸಿನ ಸೊರಾಬ್ಜಿ, ಆನ್ನಿ ಜಗನ್ನಾಥನ್, ರುಕ್ಮಾಬಾಯಿ ಇವರೆಲ್ಲ ಮಹಿಳಾ ಶಿಕ್ಷಣಕ್ಕಾಗಿ ಮಹಿಳೆಯರಲ್ಲಿ ಜಾಗೃತಿ ಮೂಡಿಸುವುದಕ್ಕಾಗಿ ವಿವಿಧ ಸಂಸ್ಥೆಗಳನ್ನು ಸ್ಥಾಪಿಸಿ, ದುಡಿದರು.

20ನೇ ಶತಮಾನದಲ್ಲಿ ಮಹಿಳಾ ಚಳವಳಿಯ ವ್ಯಾಪ್ತಿ ವಿಸ್ತೃತವಾಯಿತು. ಮಹಿಳಾ ಸಂಘಟನೆಗಳು ಹುಟ್ಟಿಕೊಂಡು ತಮ್ಮ ಹಕ್ಕುಗಳಿಗಾಗಿ ತಾವೇ ಹೋರಾಡಲು ಪ್ರಾರಂಭಿಸಿದವು. ಇದರಿಂದ ಮಹಿಳೆಯರಲ್ಲಿ ಆತ್ಮವಿಶ್ವಾಸ ಮೂಡಿತು.

1917ರಷ್ಟು ಹಿಂದೆಯೇ ಮಹಿಳೆಯರು ರಾಜಕೀಯ ಮತದಾನದ ಹಕ್ಕಿಗಾಗಿ ನಡೆಸಿದ ಚಳವಳಿ ಅತ್ಯಂತ ಪ್ರಮುಖವಾದದ್ದು. ಆ್ಯನಿಬೆಸೆಂಟ್, ಮಾರ್ಗರೆಟ್ ಕಸಿನ್ಸ್ ಹಾಗೂ 8 ಮಂದಿ ಭಾರತೀಯ ಮಹಿಳೆಯರ ನಿಯೋಗ ಸರೋಜಿನಿ ನಾಯ್ಡು ಅವರ ನೇತೃತ್ವದಲ್ಲಿ, ಭಾರತೀಯ ಮಹಿಳೆಯರಿಗೆ ಮತದಾನದ ಹಕ್ಕು ನೀಡಬೇಕೆಂದು ಒತ್ತಾಯಿಸಲು, ಅಂದಿನ ವೈಸರಾಯ್ ಜೇಮ್ಸ್ ಫೋರ್ಡ್ ಹಾಗೂ ಮಾಂಟೆಗೋ ಅವರನ್ನು ಭೇಟಿ ಮಾಡಲು ಮದರಾಸಿಗೆ ತೆರಳಿತ್ತು. ಭಾರತದ ಮಹಿಳಾ ಚಳವಳಿಯಲ್ಲಿ ಇದೊಂದು ಮೈಲಿಗಲ್ಲು.

ಆ್ಯನಿಬೆಸೆಂಟಳ ಹೋಂರೂಲ್ ಲೀಗ್ ಅನ್ನು ಭಾರತದ ಪ್ರಪ್ರಥಮ ಮಹಿಳಾವಾದಿ ಸಂಘಟನೆ ಎಂದು ಗುರುತಿಸಲಾಗುತ್ತದೆ. ಅಸಹಕಾರ ಚಳವಳಿಯಲ್ಲಿ ತಮ್ಮ ತನುಮನ ಧನ ತೆತ್ತು ದುಡಿದವರೆಂದರೆ ಕಮಲಾದೇವಿ ಚಟ್ಟೋಪಾಧ್ಯಾಯ, ಸರೋಜಿನಿ ನಾಯ್ಡು, ರಾಜಕುಮಾರಿ ಅಮೃತ್ ಕೌರ್, ಲಜ್ಜಾವಂತಿ, ಬಸಂತಿದೇವಿ, ದುರ್ಗಾಬಾಯಿ ದೇಶ್‌ಮುಖ್.

ಬ್ರಿಟಿಷರ ಕಾರ್ಯನೀತಿಯನ್ನು ವಿರೋಧಿಸುವ ದಂಡಿಯಾತ್ರೆ 1930ರ ಮಾರ್ಚ್ 12ರಂದು ಪ್ರಾರಂಭವಾಗಿ ಏಪ್ರಿಲ್ 6ರಂದು ಕೊನೆಗೊಂಡಿತು. ಇದರಲ್ಲಿ ಮಹಿಳೆಯರು ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಭಾಗವಹಿಸಿ, ಪೊಲೀಸರ ಹಿಂಸೆಗೆ ಒಳಗಾಗಿ ಜೈಲು ಸೇರಿದರು. ಅನೇಕ ಮಹಿಳೆಯರು ತಮ್ಮ ಪ್ರಾಣವನ್ನೇ ಬಲಿಕೊಟ್ಟರು.

ಸ್ವಾತಂತ್ರ್ಯ ಸಿಕ್ಕನಂತರ, ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹೋರಾಡಿದ ಹೆಚ್ಚಿನ ಮಹಿಳೆಯರು ಕಾಂಗ್ರೆಸ್ ಸದಸ್ಯರಾದರು. ಆದರೆ, ರಾಷ್ಟ್ರೀಯತೆಯ ಕಾವು ಇಲ್ಲದ್ದರಿಂದ ಮಹಿಳಾ ಚಳವಳಿ ನಿಸ್ತೇಜವಾಗಿತ್ತು. 1970ರ ನಂತರ ಮಹಿಳಾ ಚಳವಳಿ ಶಕ್ತಿಪೂರ್ಣವಾಗಿ ಸರ್ವತೋಮುಖವಾಗಿ ಬೆಳೆಯಿತು. ಈ ಕಾಲದಲ್ಲಿ ಹಲವು ಕಾರ್ಮಿಕ ಸಂಘಟನೆಗಳು ಆರಂಭವಾಗಿ, ಮಹಿಳಾ ಕಾರ್ಮಿಕರ ಹಕ್ಕುಗಳಿಗೆ ದನಿಕೊಡತೊಡಗಿದವು. 'ಸಮಾನ ಪರಿಶ್ರಮಕ್ಕೆ ಪುರುಷ–ಮಹಿಳೆಯರಿಬ್ಬರಿಗೂ ಸಮಾನ ವೇತನ' ನೀಡಬೇಕೆಂಬ ಕಾರ್ಮಿಕ ಸಂಘಟನೆಗಳ ಬೇಡಿಕೆಗೆ ಕಾನೂನು ಮಾನ್ಯತೆ ದೊರೆತದ್ದು 1976ರಲ್ಲಿ. ಕರ್ನಾಟಕದಲ್ಲಿ ಇದಕ್ಕಾಗಿ ಹೋರಾಡಿದವರೆಂದರೆ ಮೇರಿ ದೇವಾಸಿಯಾ, ಸುಜಾತ ಮುಂತಾದ ಕಾರ್ಮಿಕ ಮುಖಂಡರು.

ಇಲ್ಲಿ, ಪರಿಸರ ಚಳವಳಿಗಳ ಬಗ್ಗೆಯೂ ಸ್ವಲ್ಪ ಹೇಳಬೇಕು. ಪರಿಸರನಾಶದಿಂದ ಅತ್ಯಂತ ತೊಂದರೆಗೊಳಗಾಗುವವರೆಂದರೆ ಗ್ರಾಮೀಣ

ಮಹಿಳೆಯರು. 1973ರಲ್ಲಿ ಉತ್ತರಭಾರತದಲ್ಲಿ 'ಚಿಪ್ಕೊ' ಚಳವಳಿ ಆರಂಭವಾಯಿತು. 'ಚಿಪ್ಕೊ' ಎಂದರೆ 'ಅಪ್ಪಿಕೋ' ಎಂದರ್ಥ. ಸರ್ಕಾರಿ ಮತ್ತು ಖಾಸಗಿ ಜನ ಮರಗಳನ್ನು ಕಡಿಯಲು ಬಂದಾಗ ಗ್ರಾಮೀಣ ಜನ ಆ ಮರಗಳನ್ನು ಅಪ್ಪಿಕೊಂಡು ಮರಕಡಿಯುವವರನ್ನು ಓಡಿಸಿದ ಕಥೆ ಇದು. ಇದನ್ನು ಆರಂಭಿಸಿದವರು ಸುಂದರ್‌ಲಾಲ್ ಬಹುಗುಣ ಆಗಿದ್ದರೂ ಸಹಸ್ರ ಸಂಖ್ಯೆಯಲ್ಲಿ ಗ್ರಾಮೀಣ ಮಹಿಳೆಯರು ಇದರಲ್ಲಿ ಭಾಗವಹಿಸಿದ್ದರು. ಇದರಂತೆಯೇ ನರ್ಮದಾ ಬಚಾವೋ ಆಂದೋಲನದ ಮೇಧಾಪಾಟ್ಕರ್ ಇಲ್ಲಿ ಹೆಸರಿಸಬೇಕಾದಂತಹವರು.

ಇದೇ ರೀತಿ ಉತ್ತರ ಕನ್ನಡದಲ್ಲಿ ಆರಂಭವಾದ 'ಅಪ್ಪಿಕೋ' ಚಳವಳಿಯ ನೇತಾರರಾಗಿದ್ದ ಡಾ. ಕುಸುಮಾ ಸೊರಬ, ತಮ್ಮ ಕೊನೆಗಾಲದವರೆಗೂ ಪಶ್ಚಿಮಘಟ್ಟಗಳೂ ಸೇರಿದಂತೆ, ಉತ್ತರ ಕನ್ನಡ ಜಿಲ್ಲೆಯ ಪರಿಸರವನ್ನು ನಾಶ ಮಾಡುವ ಯಾವುದೇ ಯೋಜನೆಯಿದ್ದರೂ ಅದನ್ನು ಉಗ್ರವಾಗಿ ಪ್ರತಿಭಟಿಸಿದವರು.

ರಾಷ್ಟ್ರಮಟ್ಟದ-ಅಂತರರಾಷ್ಟ್ರೀಯ ಮಟ್ಟದ ಇನ್ನೊಬ್ಬ ಪರಿಸರವಾದಿ ಹಾಗೂ ಸ್ತ್ರೀವಾದಿ ಡಾ. ವಂದನಾಶಿವ ಅವರನ್ನು ನಾವು ಮರೆಯುವಂತಿಲ್ಲ. ಶ್ರೀಮತಿ ವಂದನಾಶಿವ ಅವರು ವಿದೇಶಿ ಕಂಪನಿಗಳೊಡನೆ ನಮ್ಮ ಸರ್ಕಾರ ಮಾಡಿಕೊಳ್ಳುವ ಒಪ್ಪಂದಗಳು ಹಾಗೂ ವಿದೇಶಿ ಕಂಪನಿಗಳ ವ್ಯವಹಾರಗಳು, ನಮ್ಮ ದೇಶದ ಕೃಷಿಕರ ಮೇಲೆ, ನಮ್ಮ ಬೆಳೆಗಳ ಮೇಲೆ ಯಾವ ರೀತಿಯ ಅಹಿತಕಾರಿ ಪರಿಣಾಮ ಬೀರುತ್ತವೆ, ಅದರಿಂದಾಗುವ ಅನಾಹುತಗಳೇನು ಎಂಬುದನ್ನು ಸರ್ಕಾರಕ್ಕೆ ಮನದಟ್ಟು ಮಾಡಿಕೊಡುವ ಪ್ರಯತ್ನ ಮಾಡುತ್ತಾರೆ.

* * *

ರಾಜಕೀಯದಲ್ಲಿ ಮಹಿಳೆಯರು ಸಕ್ರಿಯವಾಗಿ ಭಾಗವಹಿಸದಂತೆ ತಡೆಯುವ ಅಂಶಗಳೆಂದರೆ-ಚುನಾವಣೆಗೆ ತಗಲುವ ವೆಚ್ಚ ಹೆಚ್ಚುತ್ತಿರುವುದು, ಹಿಂಸೆಯ ಭಯ, ಚಾರಿತ್ರ್ಯವಧೆಯ ಭಯ ಹೀಗಾಗಿ ಸಾಮಾನ್ಯ ಮಹಿಳೆ ರಾಜಕೀಯದಿಂದ ದೂರವೇ ಉಳಿಯಬಯಸುತ್ತಾಳೆ.

ಇಂದಿನ ರಾಜಕಾರಣದ ಪರಿಸ್ಥಿತಿಯನ್ನೊಂದಷ್ಟು ನೋಡೋಣ. ಈಗ ರಾಜಕೀಯ ಕ್ಷೇತ್ರದಲ್ಲಿ, ಪಕ್ಷಭೇದವಿಲ್ಲದೆ ಭ್ರಷ್ಟಾಚಾರ ತಾಂಡವ ವಾಡುತ್ತಿದೆ. ಸಹಸ್ರ ಕೋಟಿ ಆಸ್ತಿ ಮಾಡದ, ಸ್ವಜನ ಪಕ್ಷಪಾತ ಮಾಡದ, ಸ್ವಿಸ್ ಬ್ಯಾಂಕ್‌ನಲ್ಲಿ ಹಣ ಇಡದ, ಟಾಟಾ ಬಿರ್ಲಾ ಅಂಬಾನಿಗಳಿಗೆ ಮಣೆಹಾಕದ ಯಾವ ರಾಜಕಾರಣಿ ಇದ್ದಾನೆ? ಮಹಿಳಾ ರಾಜಕಾರಣಿಗಳೂ ಪುರುಷ ರಾಜಕಾರಣಿಗಳ ದಾರಿಯಲ್ಲೇ ಹೆಜ್ಜೆಯಿಡುತ್ತಿದ್ದಾರೆ. ಇವರು ಮಹಿಳಾ ಚಳವಳಿಗಳೊಂದಿಗೆ ಕ್ರಿಯಾಶೀಲ ಸಂಬಂಧವನ್ನು ಇರಿಸಿಕೊಂಡಿಲ್ಲ. ಒಬ್ಬ ಪುರುಷ ರಾಜಕಾರಣಿಗೂ ಒಬ್ಬ ಮಹಿಳಾ ರಾಜಕಾರಣಿಗೂ ಗುಣಮಟ್ಟದ ವ್ಯತ್ಯಾಸ ಇರಬೇಕಾಗಿತ್ತು. ಅದೀಗ ಇಲ್ಲ. ಪುರುಷ ರಾಜಕಾರಣಿಗಳ ಭ್ರಷ್ಟಾಚಾರಕ್ಕೆ ಕೈಜೋಡಿಸಿ, ತಾವೂ ಭ್ರಷ್ಟರಾಗಿರುವ ಮಂತ್ರಿಣಿಯರು, ಸಂಸದೆಯರು, ಶಾಸಕಿಯರು ಎಲ್ಲೆಲ್ಲೂ ರಾರಾಜಿಸುತ್ತಿದ್ದಾರೆ.

ಇಂಥ ಪರಿಸ್ಥಿತಿಯಲ್ಲಿ ಭರವಸೆಯ ಬೆಳಕಾಗಿ ಕಾಣುವ ಮಹಿಳಾ ರಾಜಕಾರಣಿಯರೆಂದರೆ-ಮಹಾರಾಷ್ಟ್ರದ ಅಹಲ್ಯಾ ರಾಂಗ್ಣೇಕರ್, ತ್ರಿಪುರಾದ ಇಳಾ ಭಟ್ಟಾಚಾರ್ಯ, ಬಂಗಾಳದ ಕನಕ ಮುಖರ್ಜಿ, ಕಾನ್ಪುರದ ಲಕ್ಷ್ಮಿ ಸೆಹಗಲ್, ಆಂಧ್ರಪ್ರದೇಶದ ಮಲ್ಲು ಸ್ವರಾಜ್ಯಂ, ತ್ರಿಪುರಾದ ಮಂಗಳೇಶ್ವರಿ ದೇಬ್‌ಬರ್ಮಾ, ಬಂಗಾಳದ ಮಂಜರಿಗುಪ್ತ ಮತ್ತು ಪಂಕಜ ಆಚಾರ್ಯ, ಆಂಧ್ರದ ಮೋಟೂರು ಉದಯಂ, ತಮಿಳುನಾಡಿನ ಪಾಪ್ಪ ಉಮಾನಾಥ್, ಕೇರಳದ ಸುಶೀಲಾ ಗೋಪಾಲನ್, ಮಹಾರಾಷ್ಟ್ರದ ವಿಮಲ್ ರಣದಿವೆ.

ಇವರೆಲ್ಲರೂ ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪಾಲ್ಗೊಂಡು, ಗಾಂಧೀಜಿಯ ಪ್ರಭಾವಕ್ಕೆ ಒಳಗಾಗಿ, ಲಾಠಿ ಏಟು ತಿಂದು, ಜೈಲು ಸೇರಿದ ಮಹಿಳೆಯರೇ. ಆದರೆ, ಕಾಂಗ್ರೆಸ್ಸಿನ ಧೋರಣೆಗಳಿಂದ ಅತೃಪ್ತರಾಗಿ ಎಡಪಕ್ಷ ಸೇರಿ ಕಮ್ಯೂನಿಸ್ಟ್‌ರಾದವರು. ಮಾಧ್ಯಮಗಳೂ ಇಂಥ ತ್ಯಾಗಜೀವಿಗಳಿಗೆ ಪ್ರಚಾರ ಕೊಡುವುದಿಲ್ಲ. ಇವರಲ್ಲಿ ಒಬ್ಬೊಬ್ಬರ ಬದುಕೂ ಒಂದೊಂದು ಸಾಹಸಗಾಥೆ, ತಮ್ಮ ಜೀವಿತದ ಕೊನೆತನಕ ಮಂತ್ರಿಸ್ಥಾನ ಗಳಿಸಿದರೂ, ಶಾಸಕಿಯರಾದರೂ, ಸಂಸದೆಯರಾದರೂ ಒಂದು ಪೈಸೆ ಆಸ್ತಿ ಮಾಡದೆ ನಿಷ್ಕಾಮ ಕರ್ಮದಿಂದ ಬಡವರಿಗಾಗಿ ಹೋರಾಡಿ, ಕೆಲವರು ಕೊನೆಗಾಲದಲ್ಲಿ ಹೊಟ್ಟೆಗಿಲ್ಲದೆ ಬದುಕಿ, ಬೆಳಕು ಕೊಟ್ಟು ಹೋದರು. ಇಂಥವರ ರಾಜಕೀಯ ನಮ್ಮ ಮಹಿಳೆಯರಿಗೆ ಆದರ್ಶವಾಗಬೇಕು. ಕೆಲವು ಪಶ್ಚಿಮದ ರಾಷ್ಟ್ರಗಳ ಮಹಿಳಾ ಚಳವಳಿಗಳ ಸ್ತ್ರೀಶೋಷಣೆಯ ವಿಶ್ಲೇಷಣೆಯು ಗಂಡು-ಹೆಣ್ಣಿನ ಸಂಬಂಧದ ಕ್ಷೇತ್ರಕ್ಕೆ ಮಾತ್ರ ಸೀಮಿತವಾಗಿರುತ್ತದೆ. ಆದರೆ, ಈ ಮಹಿಳಾ ನಾಯಕಿಯರು ಅದಕ್ಕೆ ಭಿನ್ನವಾಗಿ ಮಹಿಳಾ ಶೋಷಣೆಗೂ ಸಾಮಾಜಿಕ-ಆರ್ಥಿಕ ರಚನೆಗಳು ಮತ್ತು ರಾಜ್ಯಯಂತ್ರದ ನೀತಿ-ನಿಯಮಾವಳಿಗಳಿಗೂ ಅಂತರ್ಗತ ಸಂಬಂಧ ಇದೆಯೆಂಬುದನ್ನು ಅರ್ಥ ಮಾಡಿಕೊಂಡು ಇಡೀ ದುಡಿಯುವ ವರ್ಗದ ಏಳಿಗೆ, ವಿಮೋಚನೆ ಗಾಗಿ ಶ್ರಮಿಸಿದವರು.

ಇಂಥವರೇ ಇಂದಿನ ಯುವತಿಯರಿಗೆ ಮಾದರಿಗಳಾಗಲಿ. ❑



## ಹಾಡಿದ್ದೇ ಹಾಡುವ ಕಿಸಬಾಯಿ ದಾಸರು

ಮಹಿಳೆಯರನ್ನು ತುರ್ತಾಗಿ ಮನೆಗೆ ಕಳಿಸುವ ಪ್ರಯತ್ನ ಮಾಡುತ್ತಿರುವವರು ಬಿ.ಜೆ.ಪಿ. ಮಾತ್ರವಲ್ಲ, ಕಾಂಗ್ರೆಸ್ ಸರ್ಕಾರದ ವಕ್ತಾರರೂ ಇಂತಹ ಪ್ರಯತ್ನದಲ್ಲಿ ಹಿಂದೆ ಬಿದ್ದಿಲ್ಲ. ಕೇಂದ್ರ ಸರ್ಕಾರ 50%, 33% ಮೀಸಲಾತಿಯನ್ನು ಸಂಸತ್ತಿನಲ್ಲಿ ಮಂಡಿಸುತ್ತಿದ್ದಾಗ್ಯೂ ಕೂಡಾ ಮಹಾರಾಷ್ಟ್ರದ ಕೈಗಾರಿಕಾ ಮಂತ್ರಿ ನಾರಾಯಣ ರಾಣೆ ಮಹಿಳೆಯರ ಹಕ್ಕುಗಳ ಬಗ್ಗೆ ಮಾತನಾಡುತ್ತಾ "ಮನೆ, ಮಕ್ಕಳನ್ನು ನೋಡಿಕೊಳ್ಳುವ ಕೆಲಸವನ್ನು ಮಹಿಳೆಯರು ಮೊದಲು ಮಾಡಬೇಕು. ಅದು ಅವರ ನೈತಿಕ ಹಕ್ಕಾಗಿದೆ" ಎಂದಿದ್ದಾರೆ. ಈ ಮಂತ್ರಿ ಮಹಾಶಯರೂ ಕೂಡಾ "ಮೀಸಲಾತಿ ಏಕೆ? ಮಹಿಳೆಯರೆಲ್ಲ ತಮ್ಮ ಸಾಮರ್ಥ್ಯದಿಂದಲೇ ಅಧಿಕಾರಕ್ಕೆ ಬರಬೇಕು" ಎಂದೂ ನುಡಿದಿದ್ದಾರೆ. ಇಂದಿರಾಗಾಂಧಿ, ಸೋನಿಯಾಗಾಂಧಿ ತಮ್ಮ ಸಾಮರ್ಥ್ಯದಿಂದಲೇ ಅಧಿಕಾರದ ಮಟ್ಟಕ್ಕೆ ಏರಿರುವುದರಿಂದ ಮೀಸಲಾತಿ ಕೇಳಿ ಪ್ರಯೋಜನವಿಲ್ಲ. ನೀವೂ ಹೋರಾಡಿ ಅಧಿಕಾರದ ಪದವಿಗೇರಿ, ಆದರೂ ನಮ್ಮ ಸಂಸ್ಕೃತಿಯಲ್ಲಿ ಕುಟುಂಬಕ್ಕೇ ಅದ್ಯತೆಯನ್ನು ಮಹಿಳೆಯರು ನೀಡಬೇಕು. ಅದು ಅವರ ನೈತಿಕ ಹೊಣೆ ಎಂದೂ ಅಪ್ಪಣೆ ಕೊಡಿಸಿದ್ದಾರೆ!

ಮಹಿಳೆಯರ ಹಕ್ಕುಗಳು ಕುಟುಂಬಕ್ಕೇ ಮೀಸಲಾಗಿರಲಿ ಎನ್ನುವ ಇಂತಹ ರಾಜಕಾರಣಿಗಳಿಗೆ ಮಹಿಳಾ ಶಕ್ತಿಯ ಬಗ್ಗೆ ಹೆದರಿಕೆ ಇದೆ ಎಂಬುದು ಸ್ಪಷ್ಟವಾಗುತ್ತದೆ. ಮೀಸಲಾತಿ ಜಾರಿಗೆ ಬಂದಲ್ಲಿ ಸಂಸತ್ತಿನಲ್ಲಿ ಮಹಿಳೆಯರ ಸಂಖ್ಯೆ ಹೆಚ್ಚಾಗುತ್ತದೆ. ಆಗ ನಾರಾಯಣ ರಾಣೆಯಂಥವರ ಅಧಿಕಾರಕ್ಕೆ ಸಂಚಕಾರ ಬರುತ್ತದೆ. ಮಹಿಳೆಯರ ನೈತಿಕ ಹೊಣೆಯನ್ನು ಕುಟುಂಬಕ್ಕೇ ಮೀಸಲಾಗಿಡಿ ಎನ್ನುವ ಇವರ ಮಾತಿನ ಹುನ್ನಾರದ ಹಿಂದೆ ತಮ್ಮ ಅಧಿಕಾರವನ್ನು ಉಳಿಸಿಕೊಳ್ಳಬೇಕೆನ್ನುವ ಪಟ್ಟಭದ್ರ ಹಿತಾಸಕ್ತಿ ಅಡಗಿದೆಯೆಂಬುದು ಅರ್ಥವಾಗದ ಮಟ್ಟಿಗೆ ಮಹಿಳೆಯರು ಮೂರ್ಖರೇನಲ್ಲ.

# ಮಾಧ್ಯಮ ಮತ್ತು ಮಹಿಳೆ

■ ಸಿ.ಜಿ. ಮಂಜುಳಾ

*ಹಿಂದಿನ ಸಂಚಿಕೆಯಿಂದ....*

**'ವೀರಮಾತೆ'**

1952ರಲ್ಲಿ 'ವೀರಮಾತೆ' ಪತ್ರಿಕೆ ಧಾರವಾಡದ ವನಿತಾ ಸಮಾಜ ದಿಂದ ಪ್ರಕಟವಾಗುತ್ತಿತ್ತು. ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆಯವರು ಸಂಪಾದಕರಾಗಿ ಕಾರ್ಯ ನಿರ್ವಹಿಸಿದ್ದಾರೆ. ಈ ಪತ್ರಿಕೆಯ ಪ್ರಧಾನ ಸಂಪಾದಕರಾಗಿದ್ದವರು ಸರೋಜಿನಿ ಮಹಿಷಿ. ಮೊದಲ ಸಂಚಿಕೆಯ ಸಂಪಾದಕೀಯದಲ್ಲಿ ಈ ಪತ್ರಿಕೆಯ ಧ್ಯೇಯೋದ್ದೇಶಗಳನ್ನು ಹೀಗೆ ಬರೆಯಲಾಗಿದೆ: "ಕನ್ನಡ ನಾಡಿನ ಮಹಿಳೆಯರು ವೀರಮಾತೆಯರಾಗ ಬೇಕಾದರೆ ಅವರಿಗೆಂದೇ ಪ್ರಚಾರ ಪಡಿಸಲ್ಪಡುತ್ತಿರುವ ಪತ್ರಿಕೆಗಳು ಹೆಚ್ಚಬೇಕು. ಪತ್ರಿಕೆಗಳು ಯಶಸ್ವಿಯಾಗಿ ನಡೆಯಬೇಕಾದರೆ ಶಿಕ್ಷಿತ ಮತ್ತು ಶ್ರೀಮಂತ ಮಹಿಳೆಯರ ನೆರವು ಅಗತ್ಯ." ಜೊತೆಗೇ 'ವೀರಮಾತೆ' ಎಂದರೆ ವೀರಪುತ್ರರನ್ನು ಪಡೆದ ಮಾತೆ ಎಂದಲ್ಲ. 'ವೀರತ್ವವನ್ನು ತನ್ನೊಳಗೇ ಬೆಳೆಸಿಕೊಂಡಿರುವ ಮಾತೆ' ಎಂದು 'ವೀರಮಾತೆ' ಪದವನ್ನು ವಿವರಿಸಲಾಗಿದೆ.

**'ಸುಪ್ರಭಾತ'-ಗಿರಿಬಾಲೆ (ಸರಸ್ವತಿಬಾಯಿ ರಾಜವಾಡೆ)**

ಇದೇ ಸಂದರ್ಭದಲ್ಲಿಯೇ ಅಂದರೆ 1952ರಲ್ಲಿ ಉಡುಪಿಯಿಂದ 'ಸುಪ್ರಭಾತ' ಪತ್ರಿಕೆಯನ್ನು ಸರಸ್ವತಿಬಾಯಿ ರಾಜವಾಡೆ (ಗಿರಿಬಾಲೆ-1913-1994) ಅವರು ಆರಂಭಿಸಿದರು. ಈ ಪತ್ರಿಕೆ ಸಂಪೂರ್ಣವಾಗಿ ಮಹಿಳೆಯರು ಬರೆದ ಬರಹಗಳಿಗೇ ಮೀಸಲಾಗಿದ್ದು ಇದರ ವಿಶೇಷ. ಯಾವ ಪುರುಷ ಲೇಖಕರ ಬರಹಕ್ಕೂ ಈ ಪತ್ರಿಕೆಯಲ್ಲಿ ಅವಕಾಶ ವಿರಲಿಲ್ಲ.

ಐವತ್ತರ ದಶಕದಲ್ಲಿ ಕನ್ನಡದ ಎಲ್ಲಾ ಪತ್ರಿಕೆಗಳಿಗೂ ಬರೆಯು ತ್ತಿದ್ದವರು ಗಿರಿಬಾಲೆ. ಆಗ ಒಬ್ಬ ತಮಿಳು ಹುಡುಗನ ಸಂಪರ್ಕದಿಂದ ತಮಿಳು ಅಕ್ಷರಮಾಲೆ ತರಿಸಿಕೊಂಡು ತಮಿಳು ಕಲಿಯುವ ಕೆಲಸ ಮಾಡಿದರು. ತಮಿಳು ಕಲಿತು ತಮಿಳಿನಲ್ಲಿಯೇ ಕತೆ ಬರೆದು ಆ ಕಥೆ ತಮಿಳು ಪತ್ರಿಕೆಯೊಂದರಲ್ಲಿ ಬಹುಮಾನ ಪಡೆದು ಪ್ರಕಟವಾಯಿತು.

ನಂತರ ಸುವಾಸಿನಿ, ಕಂಠೀರವ ಮುಂತಾದ ಕನ್ನಡ ಪತ್ರಿಕೆಗಳಿಗೂ ಮರಾಠಿ ಮಾತೃ ಭಾಷೆಯಾದ ಕಾರಣ ಅಧೈರ್ಯದಿಂದಲೇ ಬರೆಯಲು ಆರಂಭಿಸಿದರು. 1929ರಲ್ಲಿ ಆರಂಭವಾದ ಅವರ ಬರವಣಿಗೆ ನಿರಂತರವಾಗಿ ಎಲ್ಲಾ ಪತ್ರಿಕೆಗಳಲ್ಲೂ ಕಾಣಿಸಿಕೊಳ್ಳತೊಡಗಿತು. ತಾಯಿನಾಡು, ಕಂಠೀರವ, ಉಷಾ, ಅಂತರಂಗ, ಸುಬೋಧ, ಧರ್ಮಬೋಧ, ರಾಷ್ಟ್ರಬಂಧು, ಕಥಾವಳಿ – ಹೀಗೆ ಕರ್ನಾಟಕದ ಅಂದಿನ ಹೆಚ್ಚಿನ ಮುಖ್ಯ ಪತ್ರಿಕೆಗಳಲ್ಲಿ ಒಂದಲ್ಲ ಒಂದು ಕಡೆ ಗಿರಿಬಾಲೆಯವರ ಬರಹ ಇರುವುದು ಸಾಮಾನ್ಯವಾಯಿತು.

1938ರಲ್ಲಿ ಓಲೇಟಿ ವಿ.ಗುಪ್ತ ಅವರ ಸಂಪಾದಕತ್ವದಲ್ಲಿ ಬೆಂಗಳೂರಿನಲ್ಲಿ ಆರಂಭವಾದ 'ಕಥಾವಳಿ' ಮಾಸಪತ್ರಿಕೆಯಲ್ಲಿ ವನಿತಾ ವಿಭಾಗದ ಸಂಪಾದಕಿಯಾಗಿಯೂ ಆರು ವರ್ಷ ಸತತವಾಗಿ ಕಾರ್ಯ ನಿರ್ವಹಿಸಿದರು. 'ಕಥಾವಳಿ'ಯವರೇ ಆರಂಭಿಸಿದ ಮತ್ತೊಂದು ಪತ್ರಿಕೆ 'ನಿಸರ್ಗ'ದ ಅಂಕಣಗಾರ್ತಿಯಾಗಿಯೂ ಹಲವು ಬರಹಗಳನ್ನು ಬರೆದರು.

ಕಥಾವಳಿ ಪತ್ರಿಕೆಯ 'ಅಕ್ಕನ ಓಲೆ' ಅಂಕಣದಲ್ಲಿ ಸತತ ಏಳು ವರ್ಷಗಳ ಕಾಲ ಬರೆದರು. ಇತ್ತೀಚಿನ ದಿನಗಳಲ್ಲಿ ಮುಖ್ಯವಾಹಿನಿಯ ಪತ್ರಿಕೆಗಳಲ್ಲೂ ಇರುವ ಕೌನ್ಸೆಲಿಂಗ್ ಅಂಕಣಗಳಿಗೆ ಸರಿಸಮವಾದುದು ಇದು. ಅಂಕಣ ಅಕ್ಕ ತಂಗಿಗೆ ಬರೆದಂತೆ ಇರುತ್ತಿತ್ತು. "ಬಗೆಹರಿಯದ ಸಮಸ್ಯೆಗಳು ಮುಂದಾದಾಗ ಸಹೋದರಿಯರು ನನಗೆ ಪತ್ರ ಬರೆದು ಕೇಳಬಹುದು. ಸಾಧ್ಯವಾದ ಮಟ್ಟಿಗೆ ಸೂಕ್ತ ಸಲಹೆಗಳನ್ನು ಕೊಡಲಾಗುವುದು" ಎಂದು ಓಲೆಯ ಮೊದಲಿಗೆ ಸೂಚನೆ ಇರುತ್ತಿತ್ತು.

ಒಂದು ಓಲೆಯಲ್ಲಿ ವಿಧವೆಯರ ಕುರಿತು ಪ್ರಸ್ತಾಪಿಸುತ್ತಾ ಹೇಳುವ ಮಾತುಗಳಿವು: "ಸಮಾಜದ ಕರಾಳ ಶಾಸನವು ಆಕೆಗೆ ದೀಕ್ಷೆಯನ್ನು ಕೊಟ್ಟುಬಿಟ್ಟಿತು. ಈ ಇಪ್ಪತ್ತನೆಯ ಶತಮಾನದಲ್ಲೂ ಮೌಢ್ಯವು ಮಾಯವಾಗಲಾರ ದಾಯಿತಲ್ಲಾ ಎಂದು ಹೃದಯವು ಬೊಬ್ಬಿಡುತ್ತಿದೆ" ಎಂದು ಬರೆದಿದ್ದಾರೆ. ಇದೇ ಓಲೆಯಲ್ಲಿ ಮದುವೆಯಾಗದೆ ಬಸುರಾದ ಹುಡುಗಿಯ ವಿಷಯ ಪ್ರಸ್ತಾಪಿಸುತ್ತಾ ನೀಡುವ ಪರಿಹಾರ ಸಾಂಪ್ರದಾಯಿಕ ಮೌಲ್ಯಗಳಿಗೆ ಜೋತು ಬೀಳದೆ ಮಾನವೀಯ ಮೌಲ್ಯಗಳಿಗೆ ಅಂಟಿಕೊಳ್ಳುವಂತಹದ್ದು. "ತಂಗೀ ರಕ್ತಗತವಾದ ರೂಢಿಗೆ ಬಲಿ ಬೀಳಬೇಡ ತಿಳಿಯಿತೆ? ಆಕೆಯಲ್ಲಿ ಸಹಾನುಭೂತಿ ತೋರಿಸು. ಧೈರ್ಯ ಕೊಡು. ನಿಸರ್ಗ ನಿಯಮವನ್ನು ತಡೆಗಟ್ಟುವುದು ಯಾರಿಂದಲೂ ಸಾಧ್ಯವಿಲ್ಲ. ದಯವಿಟ್ಟು ಎಲ್ಲರೂ ಮಾಡುವಂತೆ ಮಾಡಲು ಬಿಡಬೇಡ. ನಿಸರ್ಗವು ಪಾಪವಲ್ಲ. ಹತ್ಯೆಯು ಮಾತ್ರ ಪಾಪ, ಘೋರ ಪಾಪವೆಂಬುದನ್ನಾಕೆಗೆ ವಿಶದ ಪಡಿಸು... ನಿಧಾನವಾಗಿ ಆಕೆಯ ಪ್ರಿಯಕರನಾರೆಂಬುದನ್ನು ಗ್ರಹಿಸು. ಅವರಿಬ್ಬರ ವಿವಾಹ ಸಾಧ್ಯವೇ ಪ್ರಯತ್ನಿಸು. ಸಾಧ್ಯವಿಲ್ಲದಿದ್ದರೆ ಯಾರಾದರೂ ಸಮಾಜ ಸುಧಾರಕನನ್ನು ಹುಡುಕಿಸಿ ಆಕೆಯ ಪಾಣಿಗ್ರಹಣ ಮಾಡಿಸಿಬಿಡು" ಎಂದು ಸೂಚಿಸಿದ್ದಾರೆ.

ಮಾನಭಂಗಕ್ಕೆ ಒಳಗಾದ ಒಬ್ಬ ಸೋದರಿಗೆ ಅವರು ಹೇಳುತ್ತಾರೆ: "ಆತ್ಮಹತ್ಯೆ ಕೂಡದು ತಂಗೀ. ನಿನ್ನ ಮೇಲೆ ನಡೆದ ಬಲತ್ಕಾರಕ್ಕೆ ನೀನು ಹೊಣೆಯಲ್ಲ. ಆದುದರಿಂದ ಆತ್ಮತಃ ನೀನು ಅಪವಿತ್ರೆಯಲ್ಲ." 'ನಿಸರ್ಗವು ಪಾಪವಲ್ಲ' ಎಂಬ ರಾಜವಾಡೆಯವರ ಧೋರಣೆ ಗಾಂಧೀ ಪ್ರಭಾವದಡಿಯಲ್ಲೂ ಇದ್ದ ಒಂದು ವಿಭಿನ್ನ ದಾರಿಯ ಸಂಕೇತ. (ಡಾ. ವಿಜಯಾದಬ್ಬೆ, 'ಮಹಿಳೆ ಸಾಹಿತ್ಯ ಸಮಾಜ' ಪುಟ 101),

'ಅಕ್ಕನ ಓಲೆ,' 'ಪ್ರಶ್ನೋತ್ತರ ವಿಭಾಗ'ಗಳಷ್ಟೇ ಅಲ್ಲದೆ ರಾಜವಾಡೆಯವರು ಕತೆಗಳನ್ನೂ ವೈಚಾರಿಕ ಲೇಖನಗಳನ್ನೂ 'ಕಥಾವಳಿ' ಯಲ್ಲಿ ಪ್ರಕಟಿಸಿದರು. ಸ್ತ್ರೀಯರ ಸ್ವತಂತ್ರ ವ್ಯಕ್ತಿತ್ವದ ಅಗತ್ಯವನ್ನು ಪ್ರತಿಪಾದಿಸುವ ಈ ಲೇಖಕಿ, 'ಸ್ತ್ರೀಯ ವ್ಯಕ್ತಿತ್ವದಲ್ಲಿ ಕೊರತೆಯಿದ್ದರೆ ಅದು ಪುರುಷರ ಅವಲಂಬನೆಯಿಂದಾಗಿ' ಎನ್ನುತ್ತಾರೆ. ಸ್ತ್ರೀಯರ ಜಾಗೃತಿ ಮತ್ತು ಸಂಘಟನೆಯ ಅಗತ್ಯವನ್ನು ತಮ್ಮ ವೈಚಾರಿಕ ಲೇಖನಗಳಲ್ಲಿ





ಪ್ರತಿಪಾದಿಸುತ್ತಾರೆ. ಮಹಿಳಾ ಸಮ್ಮೇಳನಗಳು ಹಾಗೂ ನಗರಗಳ ಸ್ತ್ರೀ ಸಮಾಜಗಳ ಮಿತಿಯನ್ನು ಅವರು ಗುರುತಿಸುತ್ತಾರೆ. “ಚರ್ಚೆಗಳು ಕೇವಲ ಮಿಸ್ ಮಿಸೆಸ್‌ಗಳಲ್ಲೇ ಮುಗಿದರೆ ಸಾಲದು. ಹರಿದ್ರಾ ಕುಂಕುಮ ಶೋಭಿತೆಯರಾದ ಶ್ರೀಮತಿ, ಸೌಭಾಗ್ಯವತಿಯರನ್ನೂ ಕರೆಸಿ ಅವರಿಗೂ ತಿಳಿಯಪಡಿಸಬೇಕು” ಎನ್ನುತ್ತಾರೆ.

ವಿವಾಹ ವಿಚ್ಛೇದನದ ಕಾಯಿದೆಯನ್ನು ಒತ್ತಾಯಿಸಿ 1946ರಲ್ಲೇ ರಾಜವಾಡೆಯವರು ಬರೆದಿದ್ದಾರೆ. (ಡಾ. ವಿಜಯಾ ದಬ್ಬೆ, ‘ಮಹಿಳೆ ಸಾಹಿತ್ಯ ಸಮಾಜ,’ ರಚನಾ ಪ್ರಕಾಶನ, ಮೈಸೂರು–1989, ಪುಟ 101).

‘ಕಥಾವಳಿ’ ವನಿತಾ ವಿಭಾಗದಲ್ಲಿ ಪ್ರಕಟವಾಗುತ್ತಿದ್ದ ಮತ್ತೆರಡು ಅಂಕಣಗಳೆಂದರೆ ‘ನಿಮ್ಮ ಪುಟ,’ ‘ಚಾರುಚಯನ.’ ಈ ಅಂಕಣಗಳೂ ಮಹಿಳೆಯರ ಪ್ರಗತಿಗಾಗಿ ಶ್ರಮಿಸಿವೆ, ‘ನಿಮ್ಮ ಪುಟ’ಕ್ಕೆ ಹಲ ಬಗೆಯ ಪ್ರಶ್ನೆಗಳು ಬರುತ್ತಿದ್ದವು. ಮೊಡವೆಗಳನ್ನು, ಸಿಡುಬುಗಳನ್ನು ನಿವಾರಿಸುವ ವಿಧಾನ ಕೇಳುವ ಪ್ರಶ್ನೆಗಳೂ ಇದರಲ್ಲಿರುತ್ತಿದ್ದವು. ಇದರಿಂದ ಪಡೆದುಕೊಂಡ ಪ್ರಯೋಜನವನ್ನೂ ಒಂದು ಪತ್ರ ತಿಳಿಸುತ್ತದೆ: “ಜ್ಞಾಪಕವಿದೆಯೆ, ಸಿಡುಬಿನ ಕಲೆಗಳ ತಂಗಿ, ಬೆಂಗಳೂರಿನ ಪಿ. ಸುಮಿತ್ರಮ್ಮ? ಈ ನನ್ನ ಕಲೆಗಳ ಹೋಗುವಿಕೆ ಮಾರ್ಚ್ 1951ರ ವನಿತಾ ವಿಭಾಗದಲ್ಲಿ ತಾವು ಉತ್ತರಿಸಿರುವ ಬ್ಲೋಸೋಫೈನ್ ಅನ್ನು ಉಪಯೋಗಿಸಿ ಕಲೆಗಳನ್ನು ಹೋಗಲಾಡಿಸುತ್ತಿರುವ ಸಂತೋಷ ಸಮಾಚಾರಕ್ಕಾಗಿ ತಮಗೆ ಮಮತೆಯ ಕೃತಜ್ಞತೆಗಳನ್ನು ಅರ್ಪಿಸಲು ಈ ಪತ್ರ ಬರೆಯುತ್ತಿರುವೆನು. ಸತ್ಯವಾಗಿಯೂ ನನ್ನ ಜೀವಮಾನ ಇರುವವರೆಗೂ ತಮ್ಮನ್ನು ಮರೆಯುವಂತಿಲ್ಲ. ಅಕ್ಕಾ” ಎಂದು ಕೃತಜ್ಞತೆ ತುಂಬಿ ಬರೆದಿದ್ದಾಳೆ.

ತನ್ನ ಸಿಡುಬಿನ ಕಲೆಗಳು ಹೋಗಲು ಕಾರಣವಾದ ವನಿತಾ ವಿಭಾಗಕ್ಕೆ ‘ನಾನು ಯಾವ ರೀತಿ ಕೃತಜ್ಞತೆ ಸಲ್ಲಿಸಲಿ’ ಎಂದು ಕೇಳಿದ ಪ್ರಶ್ನೆಗೆ “ವನಿತಾ ವಿಭಾಗಕ್ಕೆ ಸಾಹಿತ್ಯವನ್ನೊದಗಿಸುವ ಮೂಲಕ ಸೇವೆ ಸಲ್ಲಿಸಬಹುದು” ಎಂದು ಉತ್ತರ ಕೊಟ್ಟಿದ್ದಾರೆ. (ಕಥಾವಳಿ, ಜನವರಿ 1952). ಮಹಿಳೆಯರಲ್ಲಿ ಸಾಹಿತ್ಯ ರಚನೆಯ ಆಸಕ್ತಿಯನ್ನು ಹೆಚ್ಚಿಸಲು ತಮಗೆ ದೊರೆತ ಯಾವುದೇ ಅವಕಾಶವನ್ನೂ ಸರಸ್ವತಿಬಾಯಿಯವರು ಬಿಟ್ಟಿಲ್ಲ. (‘ಡಾ. ಶ್ರೀವಳ್ಳಿ ಟಿ.ಎಸ್., ಸರಸ್ವತಿಬಾಯಿ ರಾಜವಾಡೆ, 2000; ಶಿವರಾಮಕಾರಂತ ಅಧ್ಯಯನ ಕೇಂದ್ರ, ವಿವೇಕಾನಂದ ಕಾಲೇಜು ಪುತ್ತೂರು, ಪುಟ 193). ಬಹುಶಃ ಈ ಪ್ರಯತ್ನ ಸಫಲವಾಗಿದೆ ಎಂಬುದರ ದ್ಯೋತಕವಾಗಿ ತಮ್ಮ ಕಥೆ, ಕವನಗಳನ್ನೇಕೆ ಇನ್ನೂ ಪ್ರಕಟಿಸಿಲ್ಲ ಎಂಬಂತಹ ಪ್ರಶ್ನೆಗಳಿಗೆ ರಾಜವಾಡೆಯವರು ನೀಡಿರುವ ಉತ್ತರದಿಂದ ಸ್ಪಷ್ಟವಾಗುತ್ತದೆ. “ಸಂಧ್ಯಾ, ದಾವಣಗೆರೆ–ತಂಗೀ ನಿನ್ನ ಕತೆ ನನ್ನಲ್ಲಿದೆ ನಿಜ. ಏನು ಮಾಡಲಿ? ಸರದಿಬಾರದೆ ಪ್ರಕಟಿಸ ಲಾಗುವುದಿಲ್ಲ. ಒಂದಲ್ಲಾ ಒಂದು ದಿನ ಪ್ರಕಟವಾಗುವುದೆಂಬ ಧೈರ್ಯದಿಂದಿರಲಾರೆಯಾ” ಎಂದಿದ್ದಾರೆ (ಗಿರಿಬಾಲೆ, ಕಥಾವಳಿ, ಫೆಬ್ರುವರಿ 1952).

ಇನ್ನೊಂದು ಪತ್ರದಲ್ಲಿ “ಕುಮಾರಿ ಬಿ. ಉಷಾದೇವಿ, ಚನ್ನಗಿರಿ–ತಂಗೀ ನಿನ್ನ ಕತೆ ಆರಂಭ ಚೆನ್ನಾಗಿದೆ. ಕೊನೆ ಸ್ವಲ್ಪ ಅಸಂಭವದಂತೆ ಕಾಣುತ್ತಿದೆ. ಆದರೂ ತಿದ್ದಿ ನಿಧಾನವಾಗಿ ಪ್ರಕಟಿಸುವೆ. ಧೈರ್ಯಗುಂದದಿರಿ. ನಿನ್ನ ಗೆಳತಿಯರಿಗೂ ಹೆಚ್ಚು ಹೆಚ್ಚಾಗಿ ಬರೆಯಲು, ಲೇಖನ, ಕವನ, ಒಗಟು ಮುಂತಾದವುಗಳನ್ನು ಬರೆದು ನನಗೆ ಕಳುಹಿಸಲು ಪ್ರೋತ್ಸಾಹಿಸು” (ಗಿರಿಬಾಲೆ, ಕಥಾವಳಿ, ಏಪ್ರಿಲ್ 1951).

‘ಸ್ತ್ರೀ ಸಾಹಿತ್ಯ ಹೆಚ್ಚಬೇಕೆಂಬುದೇ ನನ್ನ ಹೆಬ್ಬಯಕೆ’ ಎಂದಿರುವ ಅವರು ‘ಚಾರುಚಯನ’ದಿಂದ ಅನೇಕ ಸಹೋದರಿಯರು ಬೆಳಕಿಗೆ ಬರುವಂತಾಗುವುದನ್ನು ಕಂಡು ಹೃದಯ ತುಂಬಿ ಬರುತ್ತದೆ ಎಂದಿದ್ದಾರೆ. ‘ನಿಮ್ಮ ಪುಟ’ ಹಾಗೂ ‘ಚಾರುಚಯನ’ ಅಂಕಣಗಳಲ್ಲಿ ಬರೆಯಲು ಆರಂಭಿಸಿದ ಜಿ. ಎಸ್. ಭವಾನಿ, ವೃಂದಾಕುಮಾರಿ, ಕಣಗಲ್ ಸಹೋದರಿಯರು ಮೊದಲಾದವರು ಮುಂದೆ ಸರಸ್ವತಿಬಾಯಿಯವರೇ ಆರಂಭಿಸಿದ ‘ಸುಪ್ರಭಾತ’ ಪತ್ರಿಕೆಗೂ ಬರೆದಿದ್ದಾರೆ. ಎರಡು ಅಂಕಣಗಳ ಯಶಸ್ಸನ್ನು ಕಂಡು ಸರಸ್ವತಿಬಾಯಿಯವರು ಮಹಿಳೆಯರ ಸಾಹಿತ್ಯದ ಪ್ರಗತಿಗಾಗಿ ನಂತರ ‘ಸುಪ್ರಭಾತ’ ಪತ್ರಿಕೆಯನ್ನು ಅರಂಭಿಸಿದರು.

1951ರಿಂದ ಆರಂಭವಾದ ‘ನಿಸರ್ಗ’ ಪತ್ರಿಕೆಗೂ ಬರೆಯುತ್ತಿದ್ದರು. ಈ ಪತ್ರಿಕೆಯ 14 ಸಂಚಿಕೆಗಳು ಮಾತ್ರ ಬಂದವು. ಈ 14 ಸಂಚಿಕೆಗಳಲ್ಲೂ ಸರಸ್ವತಿಬಾಯಿಯವರು ಬರೆದಿದ್ದಾರೆ. ಅಂಗೈಯಗಲದ ನಾಲ್ಕಾಣೆಯ ಈ ಮಾಸಪತ್ರಿಕೆಯ ಎಲ್ಲ ಸಂಚಿಕೆಗಳ ಮುಖಪುಟಗಳಲ್ಲೂ ನಗ್ನ ಸುಂದರಿಯರು ರಾರಾಜಿಸಿದ್ದಾರೆ. ನಿಸರ್ಗದ ಎರಡನೇ ಸಂಚಿಕೆಯಲ್ಲಿ ‘ಕಾಸಿಗೆ ಆಸೆ ರೂಪಾಯಿಗೆ ಮೋಸ!’ ಎಂಬ ಒಂದು ಲೇಖನದಲ್ಲಿ ಸರಸ್ವತಿಬಾಯಿಯವರು ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದ ನಗ್ನಚಿತ್ರಗಳ ಬಗ್ಗೆ ವಿವರಣೆ ನೀಡಿದ್ದಾರೆ. ಇದು ಗಂಡ ಹೆಂಡತಿಯ ಸಂಭಾಷಣೆ ರೂಪದಲ್ಲಿದೆ. ಗಂಡ ಹೆಂಡತಿಯನ್ನು ನಗ್ನ ಚಿತ್ರಗಳ ಬಗ್ಗೆ ವಿಚಾರಿಸಿದಾಗ ಹೆಂಡತಿ ಅದಕ್ಕೆ ಸಮಂಜಸವಾದ ವಿವರಣೆ ಕೊಟ್ಟು ಅವನ ಅನುಮಾನ ಪರಿಹರಿಸುತ್ತಾಳೆ: “ಸಂಕುಚಿತ ದೃಷ್ಟಿಯಿಂದ ನೋಡಿದರೆ ಅಭಾಸ ವಾಗುತ್ತದೆ. ಪ್ರಕೃತೀನ ನಗ್ನ ರೂಪದಲ್ಲಿ ಕಾಣೋದು ಆಭಾಸವಾದ್ರೆ ಚಿತ್ರಗಳೂ ಆಭಾಸವಾಗಿರುತ್ತೆ. ಅಲ್ಲದೆ ಮಕ್ಕಳಿಗೂ ಚಿಕ್ಕ ವಯಸ್ಸಿನಿಂದಲೇ ಲೈಂಗಿಕ ವಿಷಯದ ಬಗ್ಗೆ ಸರಿಯಾದ ಜ್ಞಾನವಿರಬೇಕು” ಎನ್ನುತಾರೆ. “ಚಿಕ್ಕಂದಿನಿಂದಲೇ ಲೈಂಗಿಕ ವಿಚಾರದ ಕುಕಲ್ಪನೆಗಳು ಇಲ್ಲದಂತಾಗುತ್ತವೆ. ಸಾಮಾನ್ಯ ಚಿತ್ರಗಳ ಮಹತ್ವವೇ ಅವಕ್ಕೂ ಬರುತ್ತದೆ.” “ಹೆಣ್ಣಾದ್ರೂ ನಿನ್ನ ಜ್ಞಾನ ದೊಡ್ಡು ಕಣೆ. ಈ ಪತ್ರಿಕೆ ಬಹಳ ಉಪಕಾರ ಮಾಡಿದಾಂಗಾಯ್ತು.” ಈ ಸಂಭಾಷಣೆಯಲ್ಲಿ ಆಕ್ಷೇಪಿಸುವ ಪಾತ್ರ ಗಂಡು; ಅದಕ್ಕೆ ಸಮರ್ಥನೆ ನೀಡುವ ಪಾತ್ರ ಹೆಣ್ಣು ಎಂಬುದು ಗಮನಿಸಬೇಕಾದ ವಿಷಯ. (ಡಾ. ಶ್ರೀವಳ್ಳಿ, ಟಿ.ಎಸ್., ಸರಸ್ವತಿಬಾಯಿ ರಾಜವಾಡೆ, 2000; ಶಿವರಾಮಕಾರಂತ ಅಧ್ಯಯನ ಕೇಂದ್ರ, ವಿವೇಕಾನಂದ ಕಾಲೇಜು ಪುತ್ತೂರು ಪುಟ 195).

*(ಮುಂದುವರಿಯುವುದು)*



Registered with Registrar of Newspapers of India under No. KARKAN/2007/22289
'NAMMA MANASA', REGD. No. : MAG(3) NPP/399(A) / 2006-07 KA/BGS/2074/2010-12